ಶ್ರೀಃ

ಶ್ರೀಮನ್ನಿಗಮಾಂತ ಮಹಾದೇಶಿಕ ವಿರಚಿತಂ

# ಅಚ್ಯುತ ಶತಕಂ

ಮತ್ತು

# ದಶಾವತಾರ ಸ್ತೋತ್ರಂ



ಕನ್ನಡ ಪದ್ಯಾನುವಾದ :

**ಪಂಡಿತ ಹೆಮ್ಮಿಗೆ ದೇಶಿಕಾಚಾರ್ಯರು**

ಬೆಂಗಳೂರು.

ಕನ್ನಡ ಗದ್ಯಾನುವಾದ :

**ವಿದ್ವಾನ್ ಎನ್.ಎಸ್. ಅನಂತರಂಗಾಚಾರ್ಯ ಬಿ.ಎ.(ಆನರ್ಸ್) ಬಿ.ಟಿ.,**

ಬೆಂಗಳೂರು.



ಪ್ರಕಾಶಕ :

**ಎನ್. ಎಸ್. ಅನಂತರಂಗಾಚಾರ್ಯ**

**ಬೆಂಗಳೂರು.**

ಶ್ರೀಃ

ಶ್ರೀಮನ್ನಿಗಮಾಂತ ಮಹಾದೇಶಿಕ ವಿರಚಿತಂ

# ಅಚ್ಯುತ ಶತಕಂ

ಮತ್ತು

# ದಶಾವತಾರ ಸ್ತೋತ್ರಂ




ಕನ್ನಡ ಪದ್ಯಾನುವಾದ :

ಪಂಡಿತ ಹೆಮ್ಮಿಗೆ ದೇಶಿಕಾಚಾರ್ಯರು

ಬೆಂಗಳೂರು.

ಕನ್ನಡ ಗದ್ಯಾನುವಾದ :

ವಿದ್ವಾನ್ ಎನ್. ಎಸ್. ಅನಂತರಂಗಾಚಾರ್ಯ ಬಿ.ಎ.(ಆನರ್ಸ್) ಬಿ.ಟಿ.,

ಬೆಂಗಳೂರು.





ಪ್ರಕಾಶಕ :

ಎನ್. ಎಸ್. ಅನಂತರಂಗಾಚಾರ್ಯ

ಬೆಂಗಳೂರು.

# ಅರಿಕೆ

ಶ್ರೀಃ

ಶ್ರೀಮತೇ ನಿಗಮಾಂತಮಹಾದೇಶಿಕಾಯ ನಮಃ

ಶ್ರೀಮದ್ವೇಂಕಟನಾಥರು ಕ್ರಿ.ಶ. ೧೩ನೆಯ ಶತಮಾನದ ಕೊನೆಯ ಭಾಗದಲ್ಲಿ ಅವತರಿಸಿ ಅನಾದಿಯಾದ ವಿಶಿಷ್ಟಾದ್ವೈತಸಿದ್ಧಾಂತವನ್ನು ಬೆಳಗಿದ ಮಹಾವಿಭೂತಿಪುರುಷರು. ಘಂಟಾವತಾರರೂ, ಕವಿತಾರ್ಕಿಕಸಿಂಹರೂ, ಸರ್ವತಂತ್ರಸ್ವತಂತ್ರರೂ ಆದ ಈ ಮಹಾನುಭಾವರು ಭಗವದ್ರಾಮಾನುಜರು ಪ್ರತಿಪಾದಿಸಿದ ದರ್ಶನ ಪದ್ಧತಿಯನ್ನು ವಿವರಿಸಿ, ವಿಶದೀಕರಿಸಿ ಸ್ಥಿರಗೊಳಿಸಿದ್ದಾರೆ. ವಿಶಿಷ್ಟಾದ್ವೈತಸಿದ್ಧಾಂತದಲ್ಲಿ ಅನೇಕ ಅಂಶಗಳನ್ನು ಸಿಷ್ಪೃಷ್ಟವಾಗಿಯೂ ನಿರ್ಧಾರಕವಾಗಿಯೂ ವಿವರಿಸಿದ ಯಶಸ್ಸು ಇವರದು. ಉತ್ತಮ ಕೋಟಿಯ ಕವಿಗಳೂ, ದಾರ್ಶನಿಕರೂ, ತಾರ್ಕಿಕರೂ ಭಗವದ್ಭಕ್ತರೂ ಆದವರಿವರು. ಇವರು ಸಂಸ್ಕೃತ ಮತ್ತು ದ್ರಾವಿಡ ಭಾಷೆಗಳಲ್ಲಿ ಬರೆದಿರುವ ಗ್ರಂಥರಾಜಗಳು ಅಮರವಾಗಿವೆ.

ಆಚಾರ್ಯರು ರಚಿಸಿದ ಕೃತಿಗಳು ನೂರಾರು. ಅವುಗಳನ್ನು ಕಾವ್ಯಗಳು, ತತ್ತ್ವಗ್ರಂಥಗಳು, ಸ್ತೋತ್ರಗಳು ಎಂದು ವಿಭಾಗ ಮಾಡಬಹುದು. ಯಾದವಾಭ್ಯುದಯ, ಹಂಸಸಂದೇಶ ಮತ್ತು ಸಂಕಲ್ಪಸೂರ್ಯೋದಯಗಳು ಸಂಸ್ಕೃತ ಸಾಹಿತ್ಯದ ಉತ್ತಮ ಕೃತಿಗಳಾಗಿವೆ. ನ್ಯಾಯಪರಿಶುದ್ಧಿ, ತತ್ತ್ವಮುಕ್ತಾಕಲಾಪ, ನ್ಯಾಯಸಿದ್ಧಾಂಜನ ಮೊದಲಾದುವು ಸಿದ್ಧಾಂತದ ಪ್ರಕರಣ ಗ್ರಂಥಗಳಾಗಿವೆ. ತಾತ್ಪರ್ಯಚಂದ್ರಿಕೆ, ಗದ್ಯಭಾಷ್ಯ, ಸ್ತೋತ್ರರತ್ನಭಾಷ್ಯ ಮೊದಲಾದುವು ಅತ್ಯುತ್ತಮವಾದ ವ್ಯಾಖ್ಯಾನಗಳಾಗಿವೆ. ತತ್ತ್ವಟೀಕಾ, ಅಧಿಕರಣ ಸಾರಾವಳಿ, ಶತದೂಷಣೀ ಮೊದಲಾದವು ವೇದಾಂತವಿಚಾರವನ್ನು ವಿವೇಚಿಸುವ ಅನುಪಮವಾದ ಗ್ರಂಥಗಳಾಗಿವೆ. ಗೋಪಾಲವಿಂಶತಿ, ದಶಾವತಾರ ಸ್ತೋತ್ರ, ಅಚ್ಯುತ ಶತಕ ಮೊದಲಾದ ಅಸಂಖ್ಯವಾದ ಸ್ತೋತ್ರಗಳು ಸುಂದರ ಸ್ತೋತ್ರಗುಚ್ಛಗಳಾಗಿವೆ. ವೇದಾಂತಾಚಾರ್ಯರ ಅದ್ಭುತವಾದ ಪಾಂಡಿತ್ಯ ಮತ್ತು ಸಾಮರ್ಥ್ಯ ಅಸಾಧಾರಣವಾದವು. ಸರ್ವದರ್ಶನಗಳಲ್ಲಿಯೂ ಅವರಿಗೆ ಅಪಾರವಾದ ಜ್ಞಾನವಿತ್ತು. ನಮ್ಮಾಳ್ವಾರರ ಶ್ರೀಸೂಕ್ತಿಗಳ ಮಧುವನ್ನು ಸಂಗ್ರಹಿಸಿ ಅವುಗಳ ತಾತ್ಪರ್ಯವನ್ನು ಅನುಪಮವಾಗಿ ತಿಳಿಸಿದ್ದಾರೆ. ಸಂಸ್ಕೃತ ಪ್ರಾಕೃತಗಳಲ್ಲಿ ಹೇಗೋ ಹಾಗೆ ದ್ರಾವಿಡಭಾಷೆಯಲ್ಲಿಯೂ ಅವರು ಅನೇಕ ಕೃತಿಗಳನ್ನು

ನಿರ್ಮಾಣಮಾಡಿ ತತ್ತ್ವವಿಚಾರವನ್ನು ವಿವರಿಸಿದ್ದಾರೆ. ಸಂಸ್ಕೃತ ಮತ್ತು ತಮಿಳಿನ ಮಿಶ್ರವಾದ ಮಣಿಪ್ರವಾಳ ಶೈಲಿಯಲ್ಲಿ ವೇದಾಂತಾರ್ಥ ವಿಚಾರಗಳನ್ನೂ ರಹಸ್ಯಗಳನ್ನೂ ಲಲಿತವಾಗಿ ಪ್ರತಿಪಾದಿಸಿದ್ದಾರೆ. ಭಾರತದೇಶದ ತತ್ತ್ವ ಜ್ಞಾನಿಗಳ ಮತ್ತು ಭಕ್ತರ ಶ್ರೇಣಿಯಲ್ಲಿ ಶ್ರೀಮದಾಚಾರ್ಯರಿಗೆ ಗೌರವ ಸ್ಥಾನವಿದೆ. ತಮ್ಮ ಆಳವಾದ ಪಾಂಡಿತ್ಯ, ಗಂಭೀರವೂ ಪ್ರಭಾವಪೂರ್ಣವೂ ಆದ ವಾದಸರಣಿ, ಅಪ್ರಕಂಪ್ಯವಾದ ನಿಷ್ಠೆ, ಗಾಢವಾದ ಭಕ್ತಿ, ಉದಾತ್ತವಾದ ವಿಚಾರ, ಸರಳವಾದ ಜೀವನ – ಇವುಗಳೆಲ್ಲದರಿಂದ ಶ್ರೀಮದಾಚಾರ್ಯರು ಕೇವಲ ವೈಷ್ಣವರಿಗೆ ಮಾತ್ರವಲ್ಲದೆ ಅಸ್ತಿಕ ಜನರಿಗೆಲ್ಲ **ದೇಶಿಕ**ರಾಗಿದ್ದಾರೆ; ಆಚಾರ್ಯರಾಗಿದ್ದಾರೆ.

'ವಿಂಶತ್ಯಬ್ದೇ ವಿಶ್ರುತ ನಾನಾವಿಧವಿದ್ಯಃ
ತ್ರಿಂಶದ್ವಾರಂ ಶ್ರಾವಿತ ಶಾರೀರಕಭಾಷ್ಯಃ |'

'ಯತಿಪ್ರವರ ಭಾರತೀರಸಭರೇಣ ನೀತಂ ವಯಃ |'

'ನಿರ್ವಿಷ್ಟಂ ಯತಿಸಾರ್ವಭೌಮವಚಸಾಮಾವೃತ್ತಿಭಿರ್ಯೌವನಂ
ನಿರ್ಧೂತೇತರ ಪಾರತಂತ್ರ್ಯನಿರಯಾ ನೀತಾಃ ಸುಖಂ ವಾಸರಾಃ |
ಅಂಗೀಕೃತ್ಯ ಸತಾಂ ಪ್ರಸತ್ತಿಂ ಅಸತಾಂ ಗರ್ವೋಽಪಿ ನಿರ್ವಾಪಿತಃ
ಶೇಷಾಯುಷ್ಯಪಿ ಶೇಷಿದಂಪತಿ ದಯಾದೀಕ್ಷಾಮುದೀಕ್ಷಾಮಹೇ ‖'

'ಯಃ ಖ್ಯಾತಿಲಾಭ ಪೂಜಾಸು ವಿಮುಖೋ ವೈಷ್ಣವೇ ಜನೇ |
ಕ್ರಯಣೀಯದಶಾಂ ಪ್ರಾಪ್ತಃ ತಸ್ಮೈ ಭವ್ಯಾಯ ಮಂಗಳಂ ‖'

ಮೊದಲಾದುವು ಆಚಾರ್ಯರ ದಿವ್ಯ ಗುಣಗಳನ್ನೂ, ಭಗವನ್ನಿಷ್ಠೆಯನ್ನೂ ಕೃತ ಕೃತ್ಯತೆಯ ಭಾವವನ್ನೂ ಸೂಚಿಸುತ್ತವೆ.

ಶ್ರೀಮದಾಚಾರ್ಯರ ಸ್ತೋತ್ರಗಳಲ್ಲಿ **ಅಚ್ಯುತಶತಕಕ್ಕೆ** ವಿಶಿಷ್ಟವಾದ ಸ್ಥಾನವಿದೆ. ಪ್ರಾಕೃತದಲ್ಲಿ ಆರ್ಯಾ ಛಂದಸ್ಸಿನಲ್ಲಿ ಇದನ್ನು ಬರೆದಿದ್ದಾರೆ. ಇದರಲ್ಲಿ ಸರ್ವರಿಗೂ ಉಪಾದೇಯತಮವಾದ ತತ್ತ್ವಹಿತಪುರುಷಾರ್ಥಗಳ ಸುಂದರವಾದ ನಿರೂಪಣೆ ಇದೆ.

ಅನಂತ ಜೀವರುಗಳು ತಮ್ಮ ತಮ್ಮ ಕರ್ಮಕ್ಕನುಗುಣವಾಗಿ ಈ ಸಂಸಾರ ದಲ್ಲಿ ತೊಳಲುತ್ತಿದ್ದಾರೆ. ಇವರು ತಮ್ಮ ನಿಜಸ್ವರೂಪವನ್ನರಿಯದೆ ದೇಹಾತ್ಮ ಭ್ರಾಂತಿಗೂ ಸ್ವತಂತ್ರಾತ್ಮಭ್ರಮೆಗೂ ವಶರಾಗಿ ತಮ್ಮ ಉದ್ಧಾರದ ದಾರಿಗಾಣ ದಿದ್ದಾರೆ. ತಮ್ಮ ಕರ್ತವ್ಯವನ್ನರಿಯದೆಯೂ, ಅರಿತುದರಲ್ಲಿಯೂ ಪ್ರತಿಕೂಲಾ ಚರಣೆ ಮಾಡುತ್ತಲೂ ಇರುವರು. ಇವರು (೭೫-೮೨) ಕರ್ಮಮಯ ಘರ್ಮ

ತಪ್ತರಾಗಿ ಸುಖಮರೀಚಿಕೆಯನ್ನನುಧಾವಿಸಿ ಬಳಲಿ ಬೆಂಡಾಗಿ, ವಿಷಯಾಕ್ರಾಂತರಾಗಿ ಸಂಸಾರ ಸಾಗರದಲ್ಲಿ ಮುಳುಗಿ ಮುಳುಗಿಹೋಗುತ್ತಿರುವರು. (೯೪, ೯೫)

ಇಂಥ ಜೀವರುಗಳಿಗೆ ಭಗವಂತನನ್ನುಳಿದು ಬೇರೆ ಯಾರು ಗತಿ? ಸರ್ವಶರೀರಿಯಾದ (೧೨) ಆ ಪರಮಾತ್ಮನೇ ರಕ್ಷಕನೆಂದು ಇವರರಿತ ಹೊರತು, ಅವನನ್ನು ಭಜಿಸಿದ ಹೊರತು ಬಿಡುಗಡೆಯಾಗದು. ಭಗವಂತನು ಆಗಮ ಮಾತ್ರ ಪ್ರಮಾಣನಾದರೂ ಅವನಲ್ಲಿ ಅಚಲವಾದ ಶ್ರದ್ಧೆಯುಳ್ಳವರಿಗೆ ಗೋಚರನಾಗುತ್ತಾನೆ. ಅವನು ಅಖಿಲಹೇಯಪ್ರತ್ಯನೀಕನೂ ಕಲ್ಯಾಣಗುಣಾಕರನೂ ಸರ್ವಕಾರಣನೂ ಸರ್ವಾಧಾರನೂ ಪ್ರತಿವಸ್ತುಪೂರ್ಣನೂ, ಸರ್ವಶರೀರಿಯೂ, ನಿಸ್ಸಮಾಭ್ಯಧಿಕನೂ, ಸರ್ವಾರಾಧ್ಯನೂ, ಸರ್ವಸಮನೂ, ಶರಣಾಗತಸತ್ಯನೂ, ಸರ್ವಸುಲಭನೂ, ಸಿದ್ಧೋಪಾಯನೂ, ಸರ್ವರಕ್ಷಕನೂ ಆದವನು. ಸಕಲ ಚೇತನರ ಉದ್ಧಾರಕ್ಕಾಗಿ ಆ ದೇವದೇವನು ಅರ್ಚಾರೂಪಿಯಾಗಿ ಅವತರಿಸಿ ದಿವ್ಯಸುಂದರವಾದ ಮಂಗಳವಿಗ್ರಹದಿಂದ ಎಲ್ಲರನ್ನೂ ವಶಪಡಿಸಿಕೊಂಡು ರಕ್ಷಿಸುತ್ತಾನೆ. ಇಂಥ ದೇವದೇವನು ದೃಷ್ಟಿಗತನಾದರೆ ಸಕಲ ಪಾಪಗಳೂ ಕಳೆದು ಹೋದಂತೆಯೇ. ಆದ್ದರಿಂದ ಮನಮುಟ್ಟಿ ಆತನನ್ನೇ ಭಜಿಸಬೇಕು. ಶ್ರೀಮದಾಚಾರ್ಯರು ಈ ಸ್ತೋತ್ರದಲ್ಲಿ ಭಗವಂತನ ಕಲ್ಯಾಣಗುಣಗಳನ್ನು ವರ್ಣಿಸಿ (೨೫ ಶ್ಲೋಕದವರೆಗೆ) ಅವನು ಮೋಕ್ಷಪ್ರದನೆಂಬುದನ್ನು ಸಾರಿ (೨೬) ಅವನ ದಿವ್ಯಮಂಗಳ ವಿಗ್ರಹದ ವರ್ಣನೆಯನ್ನು (೨೭ರಿಂದ ೪೬ರ ವರೆಗೆ) ಅದ್ಭುತವಾಗಿ ಮಾಡಿದ್ದಾರೆ. ಅವನಲ್ಲಿ ಅನನ್ಯವಾದ ಭಕ್ತಿಯನ್ನು ಹೊಂದಿದ ಭಕ್ತೋತ್ತಮರ ಮಹಿಮೆಯನ್ನು (೪೭ರಿಂದ ೫೫ರ ವರೆಗೆ, ೫೯ರಿಂದ ೬೫ರ ವರೆಗೆ ಕೊಂಡಾಡಿದ್ದಾರೆ. ಅಚ್ಯುತನು ತನ್ನ ಭಕ್ತರನ್ನು ಎಂದೂ ಕೈಬಿಡುವುದಿಲ್ಲವೆಂಬುದನ್ನು (೫೮ರಲ್ಲಿ) ಸಾರಿ ಹೇಳಿ ಭಗವಂತನ ಕೀರ್ತನಾದಿಗಳ ಭೋಗ್ಯತೆಯನ್ನು ತಿಳಿಸಿದ್ದಾರೆ. (೬೯) ಭಗವಂತನನ್ನು ಕಾಣಲು ಭಕ್ತನು ಹೇಗೆ ಹಂಬಲಿಸುವನೆಂಬುದನ್ನು (೮೪ರಿಂದ ೯೦ರ ವರೆಗೆ) ಮಾರ್ಮಿಕವಾಗಿ ತೋರಿದ್ದಾರೆ. ಜೀವನ ದೋಷಗಳನ್ನು (೭೩ರಿಂದ ೮೧ರ ವರೆಗೆ) ಪ್ರಸ್ತಾಪಿಸಿದ್ದಾರೆ. ಭಗವಂತನಲ್ಲಿ ನಾವು ಮಾಡಬೇಕಾದ ಬೇಡಿಕೆಯನ್ನು ಉಳಿದ ಭಾಗಗಳಲ್ಲಿ ತೋರಿದ್ದಾರೆ.

ಸರ್ವರಕ್ಷಕನಾದ ಭಗವಂತನಲ್ಲಿ ನಮ್ಮ ರಕ್ಷಣೆಯ ಭಾರವನ್ನು ವಹಿಸಿ ನಿರ್ಭರರೂ ನಿರ್ಭಯರೂ ಆಗಿ ಆ ಪರಮಫಲವನ್ನು ಪಡೆಯಬೇಕು. (೯೯) ಆ ದಯಾಮಯನು ತನ್ನಲ್ಲಿ ಶರಣಾದವನನ್ನು ಕೈಹಿಡಿದು ಕಾಪಾಡಿ ತನಗೆ ಸಮವಾದ ಆನಂದವನ್ನು ಅವನಿಗೂ ದೊರಕಿಸಿಕೊಟ್ಟು ತನ್ನ ನಿತ್ಯಕೈಂಕರ್ಯದ ಮಹದಾನಂದವನ್ನನುಗ್ರಹಿಸುವನು.

ನಾವು ತಿಳಿಯಬೇಕಾದ ಜ್ಞಾನಸಾರ ಯಾವುದೆಂದರೆ—'ಓ ದೇವಾ, ನಿನಗೆ ಸಮರೂ ಅಧಿಕರೂ ಇಲ್ಲ. ನೀನೇ ಸರ್ವಲೋಕಶರಣ್ಯ' ಎಂಬುದೇ! ಈ ಜ್ಞಾನವನ್ನು ಪಡೆಯುವುದಕ್ಕಾಗಿಯೇ ಮತ್ತೆಲ್ಲ ಚಿಂತನೆಯೂ,

'ನ ಖಲು ತವಸದೃಶಾಭ್ಯಧಿಕಾಃ ನಾಥ ತ್ವಮೇವ ಸರ್ವಲೋಕ ಶರಣ್ಯಃ।
ಏತಾವಜ್ಞಾನಸಾರಮಿತಿ ಜ್ಞಾತುಂ ತ್ರಿದಶನಾಥೇತರವಿಚಿಂತಾ ॥' (೧೫)

ಈ ಸ್ತೋತ್ರದಲ್ಲಿ ಈ ಉತ್ತಮ ಜ್ಞಾನ ಅಡಗಿದೆ. ಇದನ್ನು ಅನುಸಂಧಾನ ಮಾಡಿ ನಾವು ಉದ್ಧಾರವಾಗಬೇಕಾಗಿದೆ.

ಈ ಸುಂದರವಾದ ಸ್ತೋತ್ರದ ಕನ್ನಡ ಪದ್ಯಾನುವಾದವನ್ನು ಹಿರಿಯರಾದ ಶ್ರೀ ಹೆಮ್ಮಿಗೆ ದೇಶಿಕಾಚಾರ್ಯರವರು ರಚಿಸಿ ಉಪಕರಿಸಿದ್ದಾರೆ. ಆಚಾರ್ಯರ ದಶಾವತಾರ ಸ್ತೋತ್ರದ ಕನ್ನಡ ಪದ್ಯಾನುವಾದವನ್ನೂ ಅವರೇ ಮಾಡಿಕೊಟ್ಟಿದ್ದಾರೆ. ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಈ ಸ್ತೋತ್ರದ ಪ್ರಕಟಣೆಗೆ ಶ್ರೀರಂಗಪಟ್ಟಣದ ಶ್ರೀಮನ್ನಿಗಮಾಂತ ಮಹಾದೇಶಿಕ ಸಭೆಯವರು ೫೦ ರೂಪಾಯಿಗಳ ದ್ರವ್ಯಸಹಾಯ ಮಾಡುವ ಆಶ್ವಾಸನೆಯಿತ್ತಿದ್ದಾರೆ. ಅವರಿಗೆ ನನ್ನ ವಂದನೆಗಳು.

ಈ ಕೃತಿಯನ್ನು ಅತ್ಯಲ್ಪಕಾಲದಲ್ಲಿ ಬಹಳ ಒಪ್ಪಾಗಿ ಮುದ್ರಿಸಲು ಸಹಾಯ ಮಾಡಿದ ಕನ್ನಡ ಸಾಹಿತ್ಯ ಪರಿಷತ್ತಿನ ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟದವರಿಗೆ ನನ್ನ ಅನಂತ ವಂದನೆಗಳು ಸಲ್ಲುತ್ತವೆ.

ಬೆಂಗಳೂರು
ಅಶ್ವಯುಜ ಕೃಷ್ಣ ಪಂಚಮೀ
ತಾ॥ ೨೮-೧೦-೧೯೬೧

ಇಂತು ಸಜ್ಜನವಿಧೇಯ,
ಎನ್. ಎಸ್. ಅನಂತರಂಗಾಚಾರ್ಯ

# ಅಚ್ಯುತ ಶತಕಂ.

ಅನುವಾದಕ: ವಿದ್ವಾನ್ ಎನ್. ಎಸ್. ಅನಂತರಂಗಾಚಾರ್ಯರ್, ಬೆಂಗಳೂರು.

ಶ್ರೀಮಾನ್ವೇಂಕಟನಾಥಾರ್ಯಃ ಕವಿತಾರ್ಕಿಕ ಕೇಸರೀ ।
ವೇದಾಂತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾಹೃದಿ ॥

**ನಮತ ತ್ರಿದಶಾನಾಂ ನಾಥಂ ಸತ್ಯಂ ದಾಸಾನಾಮಚ್ಯುತಂ ಸ್ಥಿರಜ್ಯೋತಿಃ ।**
**ಗರುಡನದೀತಟತಮಾಲಮಹೀಂದ್ರನಗರೌಷಧಾಚಲೈಕ ಗಜೇಂದ್ರಂ ॥ ೧ ॥**

ದೇವತೆಗಳೊಡೆಯನೂ, ಭಕ್ತರಿಗೆ ಸತ್ಯಸ್ವರೂಪನೂ, ಸ್ಥಿರವಾದ ಜ್ಯೋತಿಯಿಂದ ಬೆಳಗುವವನೂ, ಗರುಡನದಿಯದಡದ ತಮಾಲನೂ, ಅಹೀಂದ್ರನಗರದ ಔಷಧಾಚಲದಲ್ಲಿ ವಿಹರಿಸುವ ಏಕೈಕ ಗಜೇಂದ್ರನೂ ಆದ ಅಚ್ಯುತನನ್ನು ನಮಿಸಿರಿ.

**ಕಿಂಕರಸತ್ಯಸ್ತುತಿಸ್ತವಸ್ವಯಂಭೂಗೇಹಿನೀವಿಲಾಸವ್ಯಾಹೃತಮಯೀ।**
**ಫಣಿತಾ ಬಾಲೇನ ಮಯಾ ಪಂಜರಶುಕಜಲ್ಪಿತಮಿವ ಕರೋತು ಪ್ರಸಾದಮ್ ॥ ೨ ॥**

ದಾಸರುಗಳಿಗೆ ಸತ್ಯರೂಪಿಯಾದವನೇ, ಸ್ವಯಂಭುವಾದ ಬ್ರಹ್ಮನ ರಾಣಿಯಿಂದ ನಲಿದು ಕೊಂಡಾಡಲ್ಪಟ್ಟ ನಿನ್ನ ಸ್ತುತಿಯನ್ನು ಬಾಲನಾದ ನಾನು ಹೇಳುತ್ತಿದ್ದೇನೆ. ಪಂಜರದೊಳಗಿನ ಗಿಣಿಯು ಕಲಿಕೆಯ ನುಡಿಯಂತೆ ಇದು ನಿನ್ನನ್ನು ಸಂತೋಷಿಸಲಿ.

**ಮಲಿನಮಪಿ ಭಾಷಿತಂ ಮಮ ಕಿಂಕರಸತ್ಯ ತವ ಕೀರ್ತಿ ಜ್ಯೋತ್ಸ್ನಾಪ್ರಸರೇ।**
**ಲಗ್ನಂ ಲಭತಾಂ ವಿಶುದ್ಧಿಂ ರಥ್ಯಾಸಲಿಲಮಿವ ತ್ರಿಪಥಗಾ ಸ್ರೋತೋ ಗತಮ್ ॥ ೩ ॥**

ಕಿಂಕರ ಸತ್ಯನೇ, ಪವಿತ್ರವಾದ ಗಂಗಾಪ್ರವಾಹವನ್ನು ಸೇರಿ ಬಚ್ಚಲ ನೀರೂ ಶುದ್ಧಿ ಹೊಂದುವಂತೆ ನಿನ್ನ ಯಶಶ್ಚಂದ್ರಿಕೆಯ ಹರಹಿನಲ್ಲಿ ಸೇರಿ ಈ ನನ್ನ ಮಲಿನವಾದ ನುಡಿಯೂ ವಿಶುದ್ಧಿಯನ್ನು ಪಡೆಯಲಿ.

**ತ್ರಸ್ತರಿಸಯೋನ ಸ್ಥಾಪಿತಾ ಶೋಭತಾಂ ತ್ರಿದಶಾನಾಂ ನಾಥ ತವ ಸಮಾಜೇ ।**
**ವಂದಿತ್ವಮಹಿತಾನಾಂ ಮಧ್ಯೇ ಶ್ರುತೀನಾಂ ಬಾಲಿಶಾ ಮಮ ಸ್ತುತಿಃ ॥ ೪ ॥**

ಎಲೈ ತ್ರಿದಶನಾಥ, ಸ್ತುತಿಸುವುದರಲ್ಲಿ ಮಹತ್ವವನ್ನು ಹೊಂದಿದ ಶ್ರುತಿಗಳ ನಡುವೆ ನಿನ್ನ ಸಭೆಯಲ್ಲಿ ಅರ್ಪಿಸಲ್ಪಟ್ಟ ಬಾಲಿಶವಾದ ಈ ನನ್ನ ಸ್ತೋತ್ರವು ಅಣಕ ಮಾಡುವ ವಿಕಟ ಕವಿಯ ನ್ಯಾಯದಂತೆ ಶೋಭಿಸಲಿ.

**ಅಸ್ಮದ್ಗುರೂಣಾಮಚ್ಯುತ ಜಿಹ್ವಾಸಿಂಹಾಸನೇ ಲಬ್ಧಪ್ರತಿಷ್ಠಃ ।**
**ಪ್ರತಿಪಾದಿತಪರಮಾರ್ಥೋ ವಾರಯಸ್ಯಪಂಡಿತತ್ವಮಸ್ಮಾಕಂ ॥ ೫ ॥**

ಹೇ ಅಚ್ಯುತ, ನಮ್ಮ ಗುರುಗಳ ಜಿಹ್ವಾಸಿಂಹಾಸನದಲ್ಲಿ ಪ್ರತಿಷ್ಠಿತನಾಗಿ ಪರಮಾರ್ಥವನ್ನುಪದೇಶಿಸಿ ನೀನು ನಮ್ಮ ಅಜ್ಞಾನವನ್ನು ನಿವಾರಿಸುತ್ತೀಯೆ.

**ಹೃದಯೇಷು ದೇಶಿಕಾನಾಂ ಜಾಹ್ನವೀಲಹರೀಷು ಪೂರ್ಣಚಂದ್ರ ಇವ ಸ್ಫುಟಃ ॥**
**ಕಲುಷಜಲೇಷ್ವಿವ ಹಂಸಃ ಕಷಾಯ ಕರ್ಬುರೇಷು ತಿಷ್ಠಸ್ಯಚ್ಯುತ ನ ಕ್ಷಣಮ್ ॥ ೬ ॥**

ಅಚ್ಯುತನೇ, ಗಂಗಾನದಿಯ ಅಲೆಗಳ ಮೇಲೆ ನರ್ತಿಸುವ ಪೂರ್ಣಚಂದ್ರನಂತೆ ನೀನೂ ಆಚಾರ್ಯರ ಹೃದಯಗಳಲ್ಲಿ ಸ್ಫುಟವಾಗಿ ಪ್ರಕಾಶಿಸುವೆ. ಆದರೆ ಕಲುಷಿತವಾದ ಜಲದಲ್ಲಿ ಹಂಸವು ಹೇಗೆ ಇರಲಾರದೋ ಹಾಗೆ ರಾಗಾದಿ ಕಷಾಯಗಳಿಂದ ಮಲಿನವಾದ ಹೃದಯಗಳಲ್ಲಿ ಕ್ಷಣಮಾತ್ರವೂ ನೀನು ನಿಲ್ಲುವವನಲ್ಲ.

**ಆಗಮಮಾತ್ರಪ್ರಮಾಣ ಆಗೋಪೀಜನಂ ಪ್ರಕಾಶನಿಜ ಮಾಹಾತ್ಮ್ಯಃ ।**
**ಶ್ರದ್ಧಿತ ಹೃದಯ ಸುಲಭಃ ದೂರಂ ಮುಂಚಸಿ ನತಸತ್ಯ ದೋಲಾಯಮಾನಾನ್ ॥ ೭ ॥**

ಹೇ ನತಸತ್ಯನೇ, ಕೇವಲ ಆಗಮಗಳಿಂದಲೇ ಅರಿಯಲ್ಪಡಬೇಕಾದ ನೀನು ಪರಮಸೌಲಭ್ಯದಿಂದ ನಿನ್ನ ಮಹಿಮೆಯನ್ನು ಮುಗ್ಧೆಯರಾದ ಗೋಪಿಯರ ಪರ್ಯಂತ ಪ್ರಕಾಶಪಡಿಸಿದೆ. ಹೃದಯದಲ್ಲಿ ಶ್ರದ್ಧೆಯುಳ್ಳವರಿಗೆ ಸುಲಭನಾದರೂ ನೀನು ಉಯ್ಯಾಲಾಡುವ ಮನಸ್ಸುಳ್ಳವರನ್ನು ದೂರದಿಂದಲೇ ಕೈ ಬಿಡುತ್ತೀಯೆ.

**ಸದಾ ಕ್ಷಪಿತಸಕಲಹೇಯಂ ಶರಣಾಗತಸತ್ಯ ಸತ್ಯಜ್ಞಾನಾನಂದಂ ।**
**ಉಲ್ಲಂಘಿತತ್ರಿವಿಧಾಂತಮುಪನಿಷದಾಂಶತಾನಿಗಾಯಂತಿತ್ವಾಮ್ ॥ ೮ ॥**

ಭೋ ಶರಣಾಗತಸತ್ಯ, ಸಕಲದೋಷರಹಿತನೂ ಸತ್ಯಜ್ಞಾನಾನಂದನೂ ಕಾಲದೇಶವಸ್ತುಗಳೆಂಬ ಮೂರು ಬಗೆಯ ಅವಧಿಗಳನ್ನು ಮೀರಿ ಅನಂತನೂ ಆದ ನಿನ್ನನ್ನು ನೂರಾರು ಉಪನಿಷತ್ತುಗಳು ಸದಾ ಕೊಂಡಾಡಿ ಹಾಡುತ್ತಿವೆ.

**ಕರೋಷಿ ನ ಕ್ರಿಯಸೇ ಕೇನಾಪಿ ಸ್ಥಾಪಯಸಿ ನ ಸಂಸ್ಥಾಪ್ಯಸೇಽನನ್ಯಸ್ಥಿತಃ ।**
**ಹರಸಿ ನಿಖಿಲಂ ನ ಹ್ರಿಯಸೇ ಅಹೀಂದ್ರನಗರೇಂದ್ರಾನಘ ಜ್ಯೋತಿಸ್ಸ್ಫುರನ್ ॥ ೯ ॥**

ಹೇ ಅಹೀಂದ್ರನಗರಾಧಿಪ, ಅನಘಜ್ಯೋತಿಸ್ಸ್ವರೂಪ, ನೀನು ಎಲ್ಲವನ್ನೂ ಸೃಜಿಸುವೆ; ನಿನ್ನನ್ನು ಯಾರೂ ಸೃಜಿಸರು. ಎಲ್ಲರನ್ನೂ ನೀನು ರಕ್ಷಿಸುವೆ; ಇತರರ ಉಪಕಾರವಿನಿತನ್ನೂ ಬಯಸದ ನೀನು ಯಾರಿಂದಲೂ ಕಾಪಾಡಲ್ಪಡುವವನಲ್ಲ. ಸಮಸ್ತವನ್ನೂ ನೀನು ಉಪಸಂಹಾರಗೊಳಿಸುವೆ; ಆದರೆ ಯಾರೂ ನಿನ್ನನ್ನು ಉಪಸಂಹಾರಗೊಳಿಸಲಾರರು.

**ಅಣುಪ್ರಮಿತಸ್ಯಾಪ್ಯಚ್ಯುತ ಶಕ್ತಿಸ್ತವ ಸಕಲಧಾರಣಾದಿಪ್ರಭೂತಾ ।**
**ತೇನ ಪ್ರತಿವಸ್ತುಪೂರ್ಣಃ ಶ್ರೂಯಸೇಽಪ್ರತಿಹತನಿಜಸ್ಥಿತಿಃ**
**ಸರ್ವಗತಃ ॥ ೧೦ ॥**

ಅಚ್ಯುತನೇ, ಅಣುವಿನ ಪ್ರಮಾಣವನ್ನು ನೀನು ಹೊಂದಿರುವಾಗಲೂ ನಿನ್ನ ಶಕ್ತಿಲೋಕದ ಸಕಲ ಪದಾರ್ಥಗಳನ್ನೂ ಧರಿಸಿ, ನಿಯಮಿಸಿ, ಪೋಷಿಸುವುದಕ್ಕೆ ಕಾರಣವಾಗಿದೆ. ಆದರಿಂದಲೇ ಸರ್ವಾಧಾರನಾದ ನೀನು ನಿನ್ನ ಸ್ಥಿತಿಗೆ ಕುಂದಿಲ್ಲದಂತೆ ಸರ್ವಗತನಾಗಿ ಪ್ರತಿವಸ್ತುವಿನಲ್ಲಿಯೂ ಪೂರ್ಣನಾಗಿರುವಿಯೆಂದುಕೇಳುತ್ತೇವೆ.

**ಸಕಲಾನಾಂ ಧರಣನಿಯಮನಸ್ವಾಮಿತ್ವನಿಯಮ ಸಂಸ್ಥಿತಃ**
**ಸರ್ವತನುಃ ।**
**ಶ್ರೂಯಸೇಽಚ್ಯುತ ಸರ್ವಃ ಸದಾ ದರ್ಶಿತಕಾರ್ಯಕಾರಣತ್ವ**
**ಕರ್ಬುರಃ ॥ ೧೧ ॥**

ಲೋಕದ ಸಮಸ್ತ ಪದಾರ್ಥಗಳಿಗಾಧಾರನೂ, ನಿಯಾಮಕನೂ, ಸ್ವಾಮಿಯೂ ಆಗಿ, ನಿನ್ನನ್ನುಳಿದ ಸಮಸ್ತವನ್ನೂ ನೀನು ಶರೀರವನ್ನಾಗಿ ಹೊಂದಿರುವೆಯೆಂದು ಕೇಳುತ್ತೇವೆ. ಎಲೈ ಅಚ್ಯುತನೇ ಅದರಿಂದಲೇ ಸರ್ವವೂ ನೀನೇ ಆಗಿ ಕಾರ್ಯ ಕಾರಣ ರೂಪಗಳನ್ನೂ ನೀನೇ ತೋರಿಸುತ್ತಿರುವೆ.

**ಪುರುಷಪ್ರಧಾನಶರೀರೋ ಭುವನಾನಾಂ ಭವಸ್ಯಚ್ಯುತೋ**
**ಪಾದಾನಮ್ ।**
**ನಿಜಸಂಕಲ್ಪಸನಾಥೋ ವಹಸಿ ನಿಮಿತ್ತತ್ವಮಪ್ಯದ್ಭುತಶಕ್ತಿಃ ॥ ೧೨ ॥**

ಅಚ್ಯುತನೇ ನೀನು ಪುರುಷನಿಗೂ, ಪ್ರಕೃತಿಗೂ ಆತ್ಮನಾಗಿರುವ ಕಾರಣ ಲೋಕಗಳಿಗೆ ನೀನೇ ಉಪಾದಾನಕಾರಣನು. ತನ್ನ ಸಂಕಲ್ಪವೊಂದನ್ನೇ ಸಹಾಯವನ್ನಾಗಿ ಉಳ್ಳವನೂ ಅತ್ಯದ್ಭುತವಾದ ಶಕ್ತಿಯುತನೂ ಆದ ನೀನು ಇವುಗಳಿಗೆ ನಿಮಿತ್ತಕಾರಣನೂ ಆಗಿರುವಿ.

**ವಿಷಮಗುಣಾಙ್ಕುರಪ್ರಕರೇ ಜಲಮಿವ ಸಾಮಾನ್ಯ ಕಾರಣಂ**
**ತವ ಕೇಳಿಃ।**
**ನಿಜಕರ್ಮಶಕ್ತಿನಿಯತಾ ಅಚ್ಯುತ ಬ್ರಹ್ಮಾದಿಸ್ಥಾವರಾನ್ತ**
**ವಿಶೇಷಾಃ ॥ ೧೩ ॥**

ಬೇರೆ ಬೇರೆ ಗುಣಗಳನ್ನುಳ್ಳ ಮೊಳಕೆಗಳ ಬೆಳವಣಿಗೆಗೆ ಹೇಗೆ ಜಲವು ಸಾಮಾನ್ಯ ಕಾರಣವೋ ಹಾಗೆ ನಿನ್ನ ಲೀಲೆ ಸೃಷ್ಟಿಗೆ ಸಾಮಾನ್ಯ ಕಾರಣ. ಆದರೆ ಅವರವರ ಕರ್ಮಶಕ್ತಿಗೆ ಅನುಗುಣವಾಗಿ ಬ್ರಹ್ಮನಿಂದ ಹಿಡಿದು ಸ್ಥಾವರಗಳ ವರೆಗೆ ಜೀವರು ಬೇರೆ ಬೇರೆಯಾಗಿ ಜನಿಸಿದ್ದಾರೆ.

ಪುರುಷಾಸ್ತ್ವವ ವಿಭೂತಿರಚ್ಯುತ ಲಕ್ಷ್ಮ್ಯಾಃ ಸ್ತ್ರೀಸಂಜ್ಞಾಃ ।
ನಾಸ್ತಿ ಪರಂ ಯುವಯೋಃ ಸಾಽಪಿ ಶ್ರೀರ್ಭವತಿ ತವ ಕಿಂ
ಪುನರಿತರತ್ ॥ ೧೪ ॥

ಅಚ್ಯುತನೇ, ಪುರುಷ ಸಂಜ್ಞೆ ಉಳ್ಳವರೆಲ್ಲರೂ ನಿನಗೆ ಸೇರಿದವರು. ಸ್ತ್ರೀಸಂಜ್ಞೆಯನ್ನುಳ್ಳವರು ಲಕ್ಷ್ಮೀದೇವಿಗೆ ಸೇರಿದವರು. ನಿಮ್ಮಿಬ್ಬರಗಿಂತ ಅಧಿಕರಿನ್ನಿಲ್ಲ. ಆ ಶ್ರೀದೇವಿಯೂ ನಿನಗೆ ಶೇಷಭೂತಳೆಂದಮೇಲೆ ಇತರರ ಮಾತೇನು?

ನ ಖಲು ತವ ಸದೃಶಾಭ್ಯಧಿಕಾ ನಾಥ ತ್ವಮೇವ ಸರ್ವಲೋಕ
ಶರಣ್ಯಃ ।
ಏತಾವಜ್ಜ್ಞಾನಸಾರಮಿತಿ ಜ್ಞಾತುಂ ತ್ರಿದಶನಾಥೇತರವಿಚಿಂತಾ॥೧೫॥

ಎಲೈ ದೇವತೆಗಳಧಿಪನೇ, ನಿನಗೆ ಸಮರಾಗಲೀ ಅಧಿಕರಾಗಲೀ ಇಲ್ಲ. ಎಲೈ ಸ್ವಾಮಿಯೇ, ನೀನೇ ಸಕಲ ಲೋಕಗಳಿಗೂ ರಕ್ಷಕನಾಗಿರುವಿ. ಇಷ್ಟುಮಾತ್ರವೇ ಜ್ಞಾನಸಾರವೆಂದು ಅರಿಯುವುದಕ್ಕಾಗಿಯೇ ಇತರ ವಿಚಾರಗಳ ಚಿಂತನೆಯಲ್ಲವೇ?

ಭಾತಿ ಫಣೀಂದ್ರಪುರಾಧಿಪ ಪ್ರತಿಪಾಲಯತ್ಸು ಪ್ರಕಟ
ಪ್ರಭೂತಫಲಾ ।
ಅಪಿ ದ್ರುಹಿಣಪ್ರಮುಖೈರಾಜ್ಞಪ್ತಿಸ್ತವಾಲಂಘನೀಯ
ಪ್ರಭಾವಾ ॥ ೧೬ ॥

ಫಣೀಂದ್ರ ನಗರಾಧಿಪನೇ, ಬ್ರಹ್ಮನೇ ಮೊದಲಾದವರಿಂದಲೂ ಮೀರಲಾಗದ ಪ್ರಭಾವವುಳ್ಳುದು ನಿನ್ನ ಅಪ್ಪಣೆ. ಅದನ್ನು ಶಿರಸಾವಹಿಸಿ ಪಾಲಿಸುವವರಲ್ಲಿ ಅತ್ಯಧಿಕವಾದ ಫಲವನ್ನದು ಪ್ರಕಟಗೊಳಿಸಿ ಮೆರೆಯುವುದು.

ನಿಯಮವಿಧೀನಾಂ ಪ್ರವೃತ್ತಿಃ ಸರ್ವೇಷಾಮಪಿ ದಾಸಸತ್ಯೋದ್ದಿಶ್ಯ
ತ್ವಾಮ್ ।
ಶ್ರಾದ್ಧನಿಮಂತ್ರಿತಬ್ರಾಹ್ಮಣಸಮಾಧಿಸಿದ್ಧಾಂ ಲಭಂತೇ
ತ್ರಿದಶಾ ಭುಕ್ತಿಮ್ ॥ ೧೭ ॥

ಎಲೈ ದಾಸಸತ್ಯನೇ, ಬಗೆಬಗೆಯಾದ ಕರ್ಮವಿಧಿಗಳ ಪ್ರವೃತ್ತಿಯೂ ನಿನ್ನನ್ನು ಪ್ರಸನ್ನಗೊಳಿಸಲು ಉದ್ದೇಶಿಸಿಯೇ ಹೊರಟಿವೆ. ಶ್ರಾದ್ಧದಲ್ಲಿ ಆಮಂತ್ರಿತರಾದ ಬ್ರಾಹ್ಮಣರ ತೃಪ್ತಿ ಪಿತೃದೇವತೆಗಳನ್ನುದ್ದೇಶಿಸಿರುವಂತೆ ದೇವತೆಗಳ ಭುಕ್ತಿಯೂ ನಿನ್ನ ತೃಪ್ತಿಯಲ್ಲಿ ಪರ್ಯವಸಾನವಾಗುವುದು.

**ಆರಾಧ್ಯತ್ರಿದಶವಿಲಯೇಽಚ್ಯುತ ನಿತ್ಯಂ ನ ತಿಷ್ಠಸಿ ಯದಿ ನಾಮ ತ್ವಮ್।**
**ಕರ್ಮಣಾಂ ಕಲ್ಪಿತಾನಾಂ ಕರಿಷ್ಯತಿ ಕಲ್ಪಾಂತರೇಷು ಕೋ ನಿರ್ವೇಶಮ್ ॥ ೧೮ ॥**

ಅಚ್ಯುತ, ಪೂಜೆಗೊಳ್ಳ ದೇವತೆಗಳು ನಾಶ ಹೊಂದಿ ಬಿಟ್ಟಾಗಲೂ ನಿತ್ಯನಾದ ನೀನು ಇಲ್ಲದೆ ಹೋಗಿದ್ದರೆ ಮಾಡಿದ ಕರ್ಮಗಳಿಗೆ ಕಲ್ಪಾಂತರಗಳಲ್ಲಿ ಯಾರು ತಾನೇ ಫಲಪ್ರದಾನ ಮಾಡುತ್ತಿದ್ದರು?

**ಕಲ್ಪಯಸಿ ಕಾಂಕ್ಷಿತಾನಿ ಕಲ್ಪದ್ರುಮ ಇವ ಶ್ರೀಕಾಂಚನಲತಾಸಹಿತಃ।**
**ನತಸತ್ಯ ಸದಾ ಫಲಾನಿ ನಿಜಚ್ಛಾಯಾ ನಿರ್ಭಿನ್ನನಿತ್ಯತಾಪತ್ರಿಭುವನಃ ॥ ೧೯ ॥**

ನತಸತ್ಯನೇ, ಶ್ರೀದೇವಿಯೆಂಬ ಕಾಂಚನಲತೆಯಿಂದ ಕೂಡಿದ ನೀನು ಕಲ್ಪವೃಕ್ಷದಂತೆ ನಿನ್ನ ನೆರಳಿನಿಂದಲೇ ಮೂರು ಲೋಕಗಳ ತಾಪವನ್ನೂ ನೀಗಿ ಬೇಡಿದ ಬಯಕೆಗಳನ್ನೆಲ್ಲಾ ಕರುಣಿಸುತ್ತಿರುವೆ.

**ಸಕಲಾಗಮಾನಾಂ ನಿಷ್ಠಾ ಸಕಲಸುರಾಣಾಮುಪ್ಯನ್ತರ ಆತ್ಮಾ।**
**ಸಕಲಫಲಾನಾಂ ಪ್ರಸೂತಿಃ ಸಕಲಜನಾನಾಂ ಸಮಃ ಖಲು ನತಸತ್ಯ ತ್ವಮ್ ॥ ೨೦ ॥**

ನಮಿಸಿದವರಿಗೆ ಸತ್ಯಸ್ವರೂಪನೇ, ನೀನು ಸಕಲಶಾಸ್ತ್ರಗಳಿಂದಲೂ ಪ್ರತಿಪಾದ್ಯನಾಗಿರುವೆ. ಸಕಲ ದೇವತೆಗಳಿಗೂ ಅಂತರಾತ್ಮನಾಗಿರುವಿ. ಸಕಲ ಫಲಗಳಿಗೂ ನೀನೇ ಕಾರಣ. ಸಕಲ ಜನರನ್ನೂ ಒಂದೇ ಸಮನಾಗಿ ಎಣಿಸುವ ಮಹಾನುಭಾವ ನೀನು.

**ಇತಿ ಸರ್ವೇಷಾಂ ಸಮಾನಃ ಸತ್ಯಸ್ಥಿತೋ ದಾಸಸತ್ಯ ಸದಾ ಪರಿಪೂರ್ಣಃ।**
**ಕಥಂ ವಹಸಿ ಪಕ್ಷಪಾತಂ ಪಾಂಡವಪ್ರಮುಖೇಷು ಪ್ರೇಷಣಮಪಿ ಸಹಮಾನಃ ॥ ೨೧ ॥**

ಎಲೈ ದಾಸಸತ್ಯನೇ,ಸತ್ಯದಲ್ಲಿ ದೃಢವಾಗಿ ನಿಂತವನೂ, ಸರ್ವರನ್ನೂ ಒಂದೇ ಸಮನಾಗಿ ಕಾಣುವವನೂ, ಸದಾಪರಿಪೂರ್ಣಕಾಮನೂ ಆದ ನೀನು ದೌತ್ಯವನ್ನೂ ಸಹಿಸುವವನಾಗಿ ಪಾಂಡವ ಪ್ರಮುಖರಲ್ಲಿ ಪಕ್ಷಪಾತವನ್ನು ತೋರಿಸಿರುವುದು ಆಶ್ಚರ್ಯವಾಗಿದೆ.

**ವಿಷಮೇ ಕರ್ಮಮಾರ್ಗೇ ವಿಪರಿಸ್ಖಲತಾಂ ವಿಹ್ವಲಿತಕರಣಾನಾಮ್।**
**ನಾಥ ನಿಖಿಲಾನಾಮನ್ಯೋ ನಾಸ್ತಿ ತ್ವನ್ನತಸತ್ಯ ಹಸ್ತಾಲಂಬಃ॥ ೨೨ ॥**

ಬಹಳ ಕಷ್ಟಕರವಾದ ಕರ್ಮಮಾರ್ಗದಲ್ಲಿ ಎಡವುತ್ತಿರುವವರೂ ಶಿಥಿಲವಾದ ಇಂದ್ರಿಯಗಳುಳ್ಳವರೂ ಆದವರೆಲ್ಲರಿಗೂ ನಿನ್ನನ್ನು ಬಿಟ್ಟರೆ ಬೇರೆಯಾವ ಅವಲಂಬನವೂ ಇಲ್ಲ.

**ಜ್ಞಾನಸ್ಯ ಕೋऽವಿಷಯೋऽಚ್ಯುತ ಕರುಣಾಯಾಸ್ತವ ಕೋ ದೂರಸ್ಥಿತಃ।**
**ಶಕ್ತೇಃ ಕೋऽತಿಭರಸ್ತಸ್ಮಾತ್ವಮುಪಾಯಸ್ತ್ವಮೇವ ಸ್ವಯಂ ಸಿದ್ಧಃ॥ ೨೩॥**

ಅಚ್ಯುತನೇ, ನಿನಗೆ ತಿಳಿಯದ ವಿಷಯವು ತಾನೇ ಯಾವುದು? ನಿನ್ನ ದಯೆಗೆ ದೂರನಾದವನು ತಾನೇ ಯಾರು? ನಿನ್ನ ಶಕ್ತಿಗೆ ಹೆಚ್ಚಾದ ಭಾರವು ತಾನೇ ಯಾವುದು? ಆದರಿಂದಲೇ ಎಲ್ಲರ ರಕ್ಷಣೆಗೂ ನೀನೇ ಸಿದ್ಧವಾದ ಉಪಾಯವಾಗಿದ್ದೀಯೆ.

**ಸಂಕಲ್ಪಕರ್ಣಧಾರಃ ಕಿಂಕರಸತ್ಯ ಭವಸಾಗರೇऽತಿ ಗಭೀರೇ।**
**ಅನಘಸ್ತ್ವಂ ಖಲು ಪೋತ ಆತ್ಮನಾಂ ಕೃಪಾಸಮೀರಣೇನ ಪ್ರಯುಕ್ತಃ॥ ೨೪ ॥**

ಕಿಂಕರ ಸತ್ಯನೇ, ಬಹು ಗಭೀರವಾದ ಸಂಸಾರ ಸಾಗರದಲ್ಲಿ ಮುಳುಗುತ್ತಿರುವ ಆತ್ಮರುಗಳಿಗೆ ನಿನ್ನ ಸಂಕಲ್ಪವೆಂಬ ನಾವಿಕನಿಂದ ಕೂಡಿ, ದಯೆಯೆಂಬ ವಾಯುವಿನಿಂದ ಚಲಿಸುವ ಅನಘನಾದ ನೀನೇ ರಕ್ಷಕನೌಕೆಯಾಗಿರುವೆ.

**ಅಚ್ಯುತ ನ ದದತಿ ಮೋಕ್ಷಮೀಶ್ವರಭಾವೇನ ಭಾವಿತಾ ಇತರ-ಸುರಾಃ।**
**ರಾತ್ರಿಂ ಪರಿವರ್ತಯಿತುಂ ಲಕ್ಷಮಾಲೇಖ್ಯದಿನಕರಾಣಾಮಪಿ ನ ಕ್ಷಮಮ್ ॥ ೨೫ ॥**

ಈಶ್ವರನೆಂಬ ಭಾವದಿಂದ ಇತರ ದೇವತೆಗಳನ್ನು ಪೂಜಿಸಿದರೂ ಅವರು ಮೋಕ್ಷವನ್ನು ಕೊಡಲಾರರು. ಭಾಸ್ಕರನ ಲಕ್ಷೋಪಲಕ್ಷ ಚಿತ್ರಗಳು ತಾನೇ ರಾತ್ರಿಯನ್ನು ಹಗಲನ್ನಾಗಿ ಪರಿವರ್ತಿಸಬಲ್ಲವೇ?

**ಅಮೃತರಸಸಾಗರಸ್ಯೇವಾಹೀಂದ್ರ ಪುರನಾಥ ನಿರ್ಮಲ-ಮಹಾರ್ಘಾಣಿ।**
**ತೀರ್ಯಂತೇ ನ ವಿಗಣಯಿತುಮನನ್ಯಸುಲಭಾನಿ ತವ ಗುಣ-ರತ್ನಾನಿ ॥೨೬॥**

ಅಹೀಂದ್ರಪುರದೊಡೆಯನೇ, ಅಮೃತರಸಸಾಗರದಲ್ಲಿನ ನಿರ್ಮಲವೂ ಬಹಳ ಬೆಲೆಬಾಳುವುವೂ ಆದ ರತ್ನಗಳನ್ನು ಹೇಗೋ ಹಾಗೆ ಇತರರಿಗಸಾಧ್ಯವೂ ನಿರ್ಮಲವೂ ಅನರ್ಘವೂ ಆದ ನಿನ್ನ ಗುಣ ರತ್ನಗಳನ್ನು ಎಣಿಸಿ ಮುಗಿಸಲಾಗುವುದಿಲ್ಲ.

**ಭೂಷಿತಶ್ರುತಿಸೀಮಂತೋ ಭುಜಗೇಂದ್ರಪುರೇಶ ಸರ್ವಗುಣ-**
**ಸೀಮಾಂತಃ ।**
**ಕ್ಷಪಿತತೃಷಾಮಲಮೋಹೋ ಮುನೀನಾಂ ಹೃದಯೇಷು ಸ್ಫುರಸಿ**
**ಶ್ಯಾಮಲಮಯೂಖಃ ॥ ೨೭ ॥**

ಭುಜಗೇಂದ್ರಪಟ್ಟಣದೊಡೆಯನೇ, ವೇದಾಂತಗಳನ್ನಲಂಕರಿಸಿ ಸರ್ವ ಗುಣಗಳಿಗೂ ಎಲ್ಲೆಯಾದ ನೀನು ತೃಷ್ಣೆ, ಪಾಪ ಮತ್ತು ಮೋಹಗಳನ್ನು ಹೋಗಲಾಡಿಸುತ್ತಾ ಶ್ಯಾಮಲವಾದ ಕಿರಣಗಳನ್ನು ಸೂಸಿ ಮುನಿಗಳ ಹೃದಯದಲ್ಲಿ ಪ್ರಕಾಶಿಸುವೆ.

**ಶುಭಲಕ್ಷಣಶ್ರೀವತ್ಸಃ ಶೋಭಸೇ ನಿರ್ಮುಕ್ತವಿರಹಕ್ಷಣಶ್ರೀವತ್ಸಃ ।**
**ರಣದೇವನಸವಿಹಗಃ ಉದ್ಭಟಗರುಡನದೀತೀರವನಸವಿಧಗತಃ ॥೨೮॥**

ಶುಭಲಕ್ಷಣವುಳ್ಳ ಶ್ರೀವತ್ಸದಿಂದ ಲಾಂಛಿತನಾಗಿ ಶ್ರೀದೇವಿಯಿಂದ ಕ್ಷಣವೂ ಅಗಲಿಕೆಯಿಲ್ಲದವನಾಗಿ ನೀನು ಶೋಭಿಸುವೆ. ಗರುಡನೊಡನೆ ಕೂಡಿಕೊಂಡು ದೈತ್ಯರೊಡನೆ ರಣಕೇಳಿಯಾಡುವೆ. ಪ್ರಕಾಶಿಸುವ ಗರುಡನದಿಯ ದಂಡೆಯ ವನದ ಬಳಿ ವಿರಾಜಿಸುವೆ ನೀನು.

**ಅಕುಮಾರಯೌವನಸ್ಥಿತಮಹೀಂದ್ರಪುರನಾಥಾಭಿಮತಮನು-**
**ರೂಪಮ್ ।**
**ನಿತ್ಯಂ ಸ್ವಭಾವಸಿದ್ಧಂ ಶ್ರೂಯತೇ ಸೂರಿಮಹಿತಂ ಸುಖಂ ತವ**
**ರೂಪಮ್ ॥ ೨೯ ॥**

ಅಹೀಂದ್ರಪುರನಾಥನೇ, ಕೌಮಾರವನ್ನು ದಾಟಿ ಯೌವನದಲ್ಲಿಯೇ ನೆಲೆನಿಂತುದೂ, ನಿನಗಭಿಮತವೂ, ಅನುರೂಪವೂ, ನಿತ್ಯವೂ, ಸ್ವಭಾವಸಿದ್ಧವೂ, ಸುಖಕರವೂ ಆದ ನಿನ್ನ ರೂಪವು ದಿವ್ಯ ಸೂರಿಗಳಿಂದ ಸ್ತುತಿಸಲ್ಪಡುತ್ತಿರುವುದು.

**ತ್ರಿಗುಣಂ ತಸ್ಯ ವಿಕಾರಾ ಅಚ್ಯುತ ಪುರುಷ ಇತ್ಯಾಗಮಗಣ್ಯಮಾನಾಃ।**
**ಅರ್ಥಾಸ್ತವ ಖಲು ಸಮಸ್ತಾಃ ಪರಸ್ಮಿನ್ರೂಪೇ ಭೂಷಣಾಸ್ತ್ರ-**
**ಸ್ವರೂಪಾಃ ॥ ೩೦ ॥**

ಅಚ್ಯುತನೇ, ಶಾಸ್ತ್ರದಲ್ಲಿ ಗಣಿಸಲ್ಪಡುತ್ತಿರುವ ಪ್ರಕೃತಿ, ಅದರ ವಿಕಾರಗಳು, ಪುರುಷ ಮೊದಲಾದ ಸಮಸ್ತ ಪದಾರ್ಥಗಳೂ ನಿನ್ನ ಪರರೂಪದಲ್ಲಿ ಭೂಷಣಗಳ ಮತ್ತು ಅಸ್ತ್ರಗಳ ಸ್ವರೂಪವನ್ನು ಹೊಂದಿ ಶೋಭಿಸುತ್ತಿವೆ.

**ನಿರ್ಯಾಂತಿ ತ್ವತ್ತೋಽಚ್ಯುತ ನಿಕ್ಷಪಿತವಿಪಕ್ಷನಿಷ್ಠುರಪರಾಕ್ರಮಣಾಃ।**
**ಸಂಸ್ಥಾಪಿತಪರಮಧರ್ಮಾಃ ಸಾಧುಪರಿತ್ರಾಣಸತ್ಫಲಾ ಅವತಾರಾಃ ॥**
**॥ ೩೧ ॥**

ಹೇ ಅಚ್ಯುತ, ಶತ್ರುಗಳನ್ನು ಧ್ವಂಸಮಾಡುವುದರಲ್ಲಿ ನಿಮ್ಮ ರಪರಾಕ್ರಮವನ್ನು ತೋರುವ, ಶಾಶ್ವತ ಧರ್ಮವನ್ನು ದೃಢವಾಗಿ ನೆಲೆಗೊಳಿಸುವ, ಸಜ್ಜನರನ್ನು ಸಂರಕ್ಷಿಸುವ ಸತ್ಫಲಗಳನ್ನುಳ್ಳ ಅವತಾರಗಳು ನಿನ್ನಿಂದ ಆಗುವುವು.

**ಹರಿಮಣಿಸದೃಕ್ಷನಿಜರುಚಿಹರಿತಾಯಮಾನಭುಜಗೇಂದ್ರಪುರ-**
**ಪರ್ಯಂತಃ ।**
**ಕಾಲೇ ದಾಸಜನಾನಾಂ ಕೃಷ್ಣಘನೋ ಭವಸಿ ದತ್ತಕಾರುಣ್ಯರಸಃ**
**॥ ೩೨ ॥**

ಇಂದ್ರನೀಲ ಮಣಿಯಂತೆ ನೀಲವಾದ ತನುಕಾಂತಿಯಿಂದ ಭುಜಗೇಂದ್ರ ಪಟ್ಟಣದ ಪರಿಸರಗಳನ್ನೂ ನೀಲವಾಗಿಸುವ ನೀನು ಭಕ್ತರಿಗೆ ಕಾಲಕಾಲಗಳಲ್ಲಿ ಕರುಣಾರಸದ ವರ್ಷವನ್ನು ಸುರಿಸುವ ಕಾಳಮೇಘವಾಗುತ್ತೀಯೆ.

**ಗರುಡನದೀಕಚ್ಛಾರಣ್ಯೇ ಲಕ್ಷ್ಯಸೇ ಲಕ್ಷ್ಮೀಮಹೀಕರೇಣು-**
**ಮನೋಹರಃ।**
**ದೃಶ್ಯಮಾನಬಹುಳದಾನೋ ದಿಶಾಗಜೇಂದ್ರ ಇವ ಖಂಡಿತ-**
**ದನುಜೇಂದ್ರದ್ರುಮಃ ॥ ೩೩ ॥**

ಶ್ರೀದೇವಿ ಭೂದೇವಿಯರೆಂಬ ಹೆಣ್ಣಾನೆಗಳ ಮನಸ್ಸನ್ನಪಹರಿಸುತ್ತಾ ಅಧಿಕವಾದ ದಾನಧಾರೆಯಿಂದ ಚೆಲುವಾಂತು ದನುಜೇಂದ್ರರೆಂಬ ಮರಗಳನ್ನು ಭಂಜಿಸುವ ದಿಗ್ಗಜದೋಪಾದಿಯಲ್ಲಿ ಗರುಡನದಿಯ ತೀರದ ವಿಪಿನದಲ್ಲಿ ವಿರಾಜಿಸುತ್ತೀಯೆ.

**ಮುಖಚಂದ್ರಮೌಲಿದಿನಕರಮಧ್ಯಸ್ಥಿತಸ್ತವ ಚಿಕುರಭಾರಾಂಧಕಾರಃ।**
**ಅಘಟಿತಘಟನಾಶಕ್ತಿಂ ಸತ್ಯಂ ಸ್ಥಾಪಯತಿ ದಾಸಸತ್ಯ ಸಮಗ್ರಾಮ್**
**॥೩೪ ॥**

ಎಲೈ ದಾಸಸತ್ಯನೇ, ನಿನ್ನ ಕಪ್ಪಾದ ಮುಂಗುರುಳುಗಳ ಅಂಧಕಾರವು ಮುಖಚಂದ್ರನಿಗೂ ಕಿರೀಟ [ವೆಂಬ ಸೂರ್ಯನಿಗೂ] ದ್ಯುಮಣಿಗೂ ನಡುವೆ ಹಾಗೆಯೇ ಉಳಿದಿದೆ. ನಿನ್ನ ಅಘಟಿತಘಟನಾಶಕ್ತಿಯನ್ನು ಸಮಗ್ರವಾಗಿ ಇದು ಸಮರ್ಥಿಸುತ್ತದೆ.

**ಪರಿಹಸಿತಪೂರ್ಣಚಂದ್ರಂಪದ್ಮಸದೃಕ್ಷಪ್ರಸನ್ನಲೋಚನಯುಗಲಂ ।**
**ಸಂಕಲ್ಪಿತದುರಿತಾನ್ಯಪಿ ಸಂಸ್ಮೃತಂ ಹರತಿ ದಾಸಸತ್ಯತವಮುಖಮ್॥**
**॥ ೩೫ ॥**

ತಾವರೆಯೋಪಾದಿಯಲ್ಲಿ ಪ್ರಸನ್ನವಾದ ನೇತ್ರದ್ವಯವನ್ನುಳ್ಳ ನಿನ್ನ ಮುಖಮಂಡಲ ಹುಣ್ಣಿಮೆಯ ಚಂದ್ರನನ್ನೂ ಧಿಕ್ಕರಿಸುತ್ತಿದೆ. ಈ ನಿನ್ನ ಮುಖಮಂಡಲದ ಸ್ಮರಣೆಯೇ ಮನಸ್ಸಿನಿಂದ ಸಂಕಲ್ಪಿಸಿದ ಪಾಪಗಳನ್ನೂ ಹೋಗಲಾಡಿಸುವುದು.

ಮಾಹಾತ್ಮ್ಯಂ ತವ ಮಹಿತಂ ಮಾಂಗಳಿಕಂ ತುಲಸೀಕೌಸ್ತುಭ -।
ಪ್ರಮುಖಾಣಾಮ್।
ಅಚ್ಯುತ ಸ್ಥಿರವನಮಾಲಂ ವತ್ಸಂ ದರ್ಶಯತಿ ಲಕ್ಷ್ಮೀಲಕ್ಷಣ-
ಸುಭಗಮ್ ॥ ೩೬ ॥

ಅಚ್ಯುತನೇ, ತುಲಸೀ, ಕೌಸ್ತುಭ ಮೊದಲಾದುವುಗಳಿಗೂ ಮಂಗಳವನ್ನುಂಟು ಮಾಡುವುದೂ, ಸಿರಿದೇವಿಯ ಅಂಕಿತದಿಂದ ಸುಭಗವಾದುದೂ ಆದ ನಿನ್ನ ವಕ್ಷಸ್ಥಲವು ದೃಢವಾದ ವನಮಾಲೆಯಿಂದಲೂ, ಶ್ರೀವತ್ಸದಿಂದಲೂ ಶೋಭಿಸುತ್ತಾ ನಿನ್ನ ಅತಿಶಯವಾದ ಮಾಹಾತ್ಮ್ಯವನ್ನು ತೋರಿಸುತ್ತದೆ.

ನಿರ್ವಿಶತಿ ನಿತ್ಯತಾಪೋ ದೇವಜನೋ ದೇವನಾಯಕವಿಧಿಪ್ರಮುಖಃ।
ಶೀತಲಶಾಂತಪ್ರಭೂತಾಂ ಛಾಯಾಂ ತವವಿಪುಲಬಾಹುಕಲ್ಪದ್ರು
ಮಾಣಾಮ್ ॥ ೩೭ ॥

ಎಲೈ ದೇವನಾಯಕ. ನಿತ್ಯವೂ ತಾಪಪೀಡಿತರಾದ ಬ್ರಹ್ಮನೇ ಮೊದಲಾದ ದೇವಜನರು ನಿನ್ನ ವಿಸ್ತಾರವಾದ ದೋರ್ದಂಡಗಳೆಂಬ ಕಲ್ಪವೃಕ್ಷಗಳ ಶಾಂತವೂ ಶೀತಲವೂ ಸಾಂದ್ರವೂ ಆದ ನೆರಳನ್ನು ಆಶ್ರಯಿಸುತ್ತಾರೆ.

ಸಂಕಲ್ಪಚಂದ್ರಕ್ಷೋಭಿತತ್ರಿಗುಣೋದಧಿವಿಪುಲಬುದ್ಬುದಪ್ರಕೃತ್ಯೈಃ ।
ಬ್ರಹ್ಮಾಂಡೈರಪಿ ಭರಿತಂ ಕಿಂಕರಸತ್ಯ ತವ ಕಸ್ಮಾನ್ಕೃಶಮುದರಮ್
॥ ೩೮ ॥

ಕಿಂಕರಸತ್ಯನೇ, ನಿನ್ನ ಸಂಕಲ್ಪವೆಂಬ ಚಂದ್ರನಿಂದ ಪ್ರಕ್ಷುಬ್ಧವಾದ ಪ್ರಕೃತಿಯೆಂಬ ಸಮುದ್ರದಲ್ಲಿ ಎದ್ದ ದೊಡ್ಡ ದೊಡ್ಡ ಗುಳ್ಳೆಗಳ ಪ್ರಕಾರವನ್ನುಳ್ಳ ಅನೇಕಾನೇಕ ಬ್ರಹ್ಮಾಂಡಗಳಿಂದ ನಿನ್ನ ಉದರವು ತುಂಬಹೋಗಿದ್ದರೂ ಅದು ಕೃಶವಾಗಿಯೇ ಇರುವುದೇಕೆ?

ನಾಭಿರುಹಂ ತವನಳಿನಂ ಭುಜಗೇಶ್ವರನಗರನಾಥ ಶೋಭತೇ
ಸುಭಗಮ್ ।
ಮಧ್ಯಸ್ಥಿತಬ್ರಹ್ಮಭ್ರಮರಂ ವತ್ಸಾಸನಲಕ್ಷ್ಮೀಪಾದಪೀಠ
ಸದೃಕ್ಷಮ್॥ ॥೩೯॥

ಭುಜಗೇಶ್ವರ ನಗರನಾಥನೇ, ನಿನ್ನ ನಾಭಿಕಮಲ ಮಧ್ಯದಲ್ಲಿರುವ ಬ್ರಹ್ಮನೆಂಬ ದುಂಬಿಯಿಂದ ಶೋಭಿಸಿ, ಶ್ರೀವತ್ಸಪೀಠದಲ್ಲಿ ನೆಲೆಸಿರುವ ಲಕ್ಷ್ಮೀದೇವಿಯ ಪಾದಪೀಠದಂತೆ ಸುಭಗವಾಗಿ ರಂಜಿಸಿದೆ.

ದೃಢಪೀಡಿತಮಧುಕೈಟಭಶೋಣಿತಪಟಲಪರಿಪಾಟಲಾಂಬರ
ಘಟಿತಾ।
ರಾಜತ್ಯಚ್ಯುತ ಮುಖರಾ ರತಿನಾಥಗಜೇಂದ್ರಶೃಂಖಲಾ ತವ
ರಶನಾ ॥ ೪೦ ॥

ಬಲವಾಗಿ ಪೀಡಿತರಾದ ಮಧುಕೈಟಭರ ರಕ್ತಪಟಲದಿಂದ ಅಧಿಕವಾಗಿ ಕೆಂಪಾದ ವಸ್ತ್ರದಿಂದ ಕೂಡಿದುದೂ, ಘಳಿರು ಘಳಿರೆನುತ ಶಬ್ದಿಸುತ್ತಾ ಮನ್ಮಥನಮದ್ದಾನೆಯ ಸರಪಣಿಯೋ ಎಂಬಂತೆ ಇರುವುದೂ ಆದ ನಿನ್ನ ಒಡ್ಯಾಣವು ಚೆಲುವಾಗಿದೆ.

**ದಾಸಾನಾಂ ಸತ್ಯ ದೃಶ್ಯತೇ ದಾನವವೀರಾಣಾಂ ದೀರ್ಘನಿದ್ರಾಶಯನಮ್ ।**
**ತವೋದರಸ್ಥಿತತ್ರಿಭುವನಪ್ರಾಸಾದಸ್ತಮ್ಭಸಚ್ಛಾಯಮೂರುಯುಗಮ್ ॥ ೪೧ ॥**

ಎಲೈ ದಾಸಸತ್ಯನೇ, ದಾನವವೀರರು ದೀರ್ಘ ನಿದ್ದೆ ಮಾಡುವ ಹಾಸಿಗೆಯಂದ ನಿನ್ನ ಎರಡು ತೊಡೆಗಳೂ ನಿನ್ನ ಹೊಟ್ಟೆಯೊಳಗಡಗಿರುವ ಮೂರು ಲೋಕಗಳೆಂಬ ಅರಮನೆಯ ಕಂಬಗಳೋ ಎಂಬಂತೆ ಕಂಡು ಬರುತ್ತವೆ.

**ಜಾನುಮಣಿದರ್ಪಣೇನ ಚ ಜಂಘಾಮರಕತಕಳಾಚಿಕಯಾ ಚ ಧನ್ಯಾ ।**
**ಅಚ್ಯುತ ನ ಮುಂಚತಿ ಕಾಂತಿರ್ಲಕ್ಷ್ಮೀರಿವ ಸರೋಜಲಾಂಛನೌ ತವ ಚರಣೌ ॥ ೪೨ ॥**

ಮಂಡಿಯ ರನ್ನಗನ್ನಡಿಯಿಂದಲೂ, ಮೊಣಕಾಲುಗಳ ಮರಕತದ ಪಡಿಗದಿಂದಲೂ ಕೂಡಿಕೊಂಡು ಅತಿಶಯವನ್ನು ಹೊಂದಿದ ಕಾಂತಿಯು ತಾವರೆಯ ಲಾಂಛನದಿಂದ ಚೆಲುವಾದ ನಿನ್ನ ಪಾದಗಳೆರಡನ್ನು ಲಕ್ಷ್ಮಿಯಂತೆ ಯಾವಾಗಲೂ ಬಿಡುವುದಿಲ್ಲ.

**ಶ್ರುತಿಸೀಮಂತಪ್ರಸೂನಂ ಶೋಭತೇ ನತಸತ್ಯತವ ಸರ್ವಶರಣ್ಯಮ್ ।**
**ಕ್ರಮಣಕ್ಷಣಜನಿತಸುರನದೀಪ್ರಶಮಿತತ್ರೈಲೋಕ್ಯಪಾತಕಂ ಪದಪದ್ಮಮ್ ॥ ೪೩ ॥**

ಶ್ರುತಿಗಳ ಬೈತಲೆಯನ್ನಲಂಕರಿಸುವ ಪುಷ್ಪಗುಚ್ಛವಾದುದೂ, ಸಮಸ್ತರಿಗೂ ರಕ್ಷಣೆಯನ್ನು ನೀಡುವುದೂ, ತ್ರಿವಿಕ್ರಮನಾಗಿ ಲೋಕವನ್ನಳೆದ ಕ್ಷಣದಲ್ಲಿ ಹುಟ್ಟಿದ ಗಂಗಾ ನದಿಯಿಂದ ಮೂರು ಲೋಕಗಳ ಪಾಪವನ್ನು ಹೋಗಲಾಡಿಸಿದುದು ಆದ ನಿನ್ನ ಪಾದಪದ್ಮ ಮಿಗಿಲಾಗಿ ಶೋಭಿಸುತ್ತಿದೆ.

**ಇತಿ ತ್ರಿಭುವನೈಕಮೂಲಮಾಸ್ವಾದಯಂತ್ಯನಘಾ ಅಮೃತಸ್ವಾದುರಸಮ್ ।**
**ಓಷಧಿಮಹೀಧರಪಾರ್ಶ್ವೇ ಉದಿತಂ ತ್ವಾಮೌಷಧಮಿವ ದಾಸರುಜಾಮ್ ॥ ೪೪ ॥**

ತ್ರಿಭುವನಗಳಿಗೂ ಮೂಲಕಾರಣನೂ, ಮಧುರವಾದ ಅಮೃತದಂತೆ ಭೋಗ್ಯನೂ ಓಷಧಿ ಪರ್ವತದ ಬಳಿ ಉದಿಸಿದವನೂ ಆದ ನಿನ್ನನ್ನು ಅನಘರಾದ ಭಕ್ತೋತ್ತಮರು ಭಕ್ತರ ರೋಗಗಳನ್ನೆಲ್ಲಾ ವಾಸಿಮಾಡುವ ದಿವ್ಯವಾದ ಔಷಧವನ್ನಾಗಿ ಆಸ್ವಾದಿಸುತ್ತಾರೆ.

**ಸಿದ್ಧಾಂಜನಮಿವ ಶ್ಯಾಮಾಂ ತವ ತನುಂ ನಿಜವಿಲೋಚನೇಷು ಕ್ಷಿಪಂತಃ ।**
**ಅಚ್ಯುತ ಲಕ್ಷ್ಮೀನಿವಾಸಂ ನಿತ್ಯನಿಗೂಢಂ ನಿಧಿಮಿವ ಪಶ್ಯಂತಿತ್ವಾಮ್ ॥ ೪೫ ॥**

ಸಿದ್ಧಾಂಜನವನ್ನು ಕಣ್ಣಿಗೆ ಹಚ್ಚಿಕೊಂಡವರು ಭೂಮಿಯಲ್ಲಿ ಹುದುಗಿರುವ ನಿಧಿಯನ್ನು ಹೇಗೆ ಕಾಣುವರೋ ಹಾಗೆ ಶ್ಯಾಮಲವಾದ ನಿನ್ನ ದಿವ್ಯ ಮಂಗಳ ವಿಗ್ರಹವನ್ನು ತಮ್ಮ ಕಣ್ಣುಗಳಲ್ಲಿ ಇಟ್ಟುಕೊಂಡವರು ಲಕ್ಷ್ಮೀ ದೇವಿಗೆ ನೆಲೆ ಮನೆಯಾಗಿ ನಿತ್ಯವೂ ಮರೆಯಾಗಿರುವ ನಿನ್ನನ್ನೇ ಕಾಣುತ್ತಾರೆ.

**ವಿಘಟಿತನಿಬಿಡಾಂಧಕಾರೋ ಘಟಮಾನಜ್ಯೋತಿಸ್ತ್ರಿಲೋಕೈಕಗ್ರಹಪತಿಃ।**
**ದೃಷ್ಟಿಗತೋ ಯೇಷಾಂ ತ್ವಂ ನಮತ್ಸತ್ಯ ನ ಖಲು ತೇಷಾಂ ಮೋಹತ್ರಿಯಾಮಾ ॥ ೪೬ ॥**

ನಮಿಸುವವರಿಗೆ ಸತ್ಯ ಸ್ವರೂಪಿಯೇ ದಟ್ಟವಾದ ಕತ್ತಲೆಯನ್ನು ಕಳೆದು ಉಜ್ವಲವಾದ ಪ್ರಕಾಶವನ್ನು ಚೆಲ್ಲುವವನಾಗಿ ನೀನು ಮೂರು ಲೋಕಗಳಿಗೂ ಏಕೈಕನಾದ ಭಾಸ್ಕರನಂತಿರುವೆ. ಯಾವ ಭಕ್ತೋತ್ತಮರಿಗೆ ನೀನು ದರ್ಶನಗೋಚರನಾಗುವೆಯೋ ಅಂತಹವರ ಮೋಹಾಂಧಕಾರ ಕಳೆದು ಹೋದಂತೆಯೇ.

**ವಿಷಯರಸೇ ಸ್ವಪಂತೋ ವಿಕಾರಜನನೈರಪಿ ಚ ನ ಖಲು ವಿಕ್ರಿಯಮಾಣಾಃ ।**
**ಜೀವನ್ಮುಕ್ತಸದೃಶಾ ಅಚ್ಯುತ ದೃಶ್ಯಂತೇ ಪಾವನಾಸ್ತವ ಭಕ್ತಾಃ ॥ ೪೭ ॥**

ಎಲೈ ಅಚ್ಯುತ, ನಿನ್ನ ಭಕ್ತೋತ್ತಮರು ಪ್ರಾಪಂಚಿಕ ವಿಷಯಗಳಲ್ಲಿ ನಿದ್ರಿಸುತ್ತಿದ್ದರೂ ಮನಸ್ಸಿಗೆ ವಿಕಾರವನ್ನುಂಟುಮಾಡುವ ಅಂಶಗಳಿಂದ ಎಳ್ಳಷ್ಟೂ ವಿಕಾರ ಹೊಂದದೆ ಜೀವನ್ಮುಕ್ತರಿಗೆ ಸದೃಶರಾಗಿ ಪಾವನರಾಗಿ ಮೆರೆದಿದ್ದಾರೆ.

**ಗಂಧರ್ವನಗರಸ್ವಪ್ನಸದೃಕ್ಷಾಣಾಂ ಶ್ರಿಯಾಂ ವನಸರಿತಾಮ್ ।**
**ನಸ್ಮರತಿ ತ್ವದ್ಗೃಹೀತಃ ಶರಣಾಗತಸತ್ಯ ಸದಾಮದೋ ಜೀವಗಜಃ ॥ ೪೮ ॥**

ಎಲೈಶರಣಾಗತಸತ್ಯನೇ, ಎಂದೂ ಮದಿಸಿದ ಜೀವಾತ್ಮನೆಂಬ ಈ ಆನೆಯನ್ನು ನೀನು ಕೈ ಹಿಡಿದುದೇ ಆದರೆ ಅವನು ಕನಸಿನ ಗಂಧರ್ವ ನಗರಕ್ಕೆ ಸಮನಾದ ಐಶ್ವರ್ಯಗಳ ವನನದಿಗಳನ್ನು ಮನಸ್ಸಿನಿಂದಲೂ ಸ್ಮರಿಸುವುದಿಲ್ಲ.

**ನ ಮುಹಯಂತಿ ಜ್ಞಾನವಂತಸ್ತರಂಗಡಿಂಡೀರಬುದ್ಬುದಸದೃಕ್ಷಾಣಿ।**
**ವಿಧಿಪ್ರಮುಖಾಣಾಂ ಪದಾನಿ ಘನಕಂದಲಿಕಂದಕದಲೀಸ್ತಂಭಸಮಾನಿ ॥ ೪೯॥**

ಕಂದಲಿ ಹುಲ್ಲಿನ ಗೆಡ್ಡೆಯಂತೆಯೂ, ಬಾಳೆಯ ಕಂಭದಂತೆಯೂ ಅಸಾರವಾಗಿ ಅಲೆ, ನೊರೆ ಹಾಗೂ ಗುಳ್ಳೆಗಳಿಗೆ ಸಮನಾದ ಬ್ರಹ್ಮಾದಿ ದೇವತೆಗಳ ಪದವಿಯನ್ನು ಜ್ಞಾನಿಗಳು ಅಧಿಕವಾದುದೆಂದು ಎಂದೂ ಭಾವಿಸರು.

**ದೃಷ್ಟಸ್ವಪರಸ್ವಭಾವಾಃ ಪುರುಷಾ ಗೃಹೀತ್ವಾಸ್ವಾಮಿನಸ್ತವಶೀಲವ್ ।**
**ನಾಥ ನತಸತ್ಯ ಸಘೃಣಾ ನ ಮುಂಚಂತಿ ಕಥಮಪಿ ಸರ್ವಜನ ಸೌಹಾರ್ದವ್ ॥ ೩೦ ॥**

ನಮಿಸಿದವರಿಗೆ ಸತ್ಯರೂಪಿಯಾದ ನಾಥನೇ, ಆತ್ಮಪರಮಾತ್ಮ ಸ್ವಭಾವವನ್ನು ಚೆನ್ನಾಗಿ ಮನಗಂಡ ಭಕ್ತೋತ್ತಮರು ಒಡೆಯನಾದ ನಿನ್ನ ನಡತೆಯನ್ನೇ ಅನುಸರಿಸಿ ದಯಾಪರರಾಗಿ ಎಂಥ ಸಮಯದಲ್ಲಿಯೂ ಸರ್ವಜನ ಸೌಹಾರ್ದವನ್ನು ಬಿಟ್ಟು ಕೊಡುವುದಿಲ್ಲ.

**ಮಾನಮದೇರ್ಷ್ಯಾಮತ್ಸರದಮ್ಭಾಸೂಯಾಭಯಾಮರ್ಷಲೋಭಮುಖಾಃ।**
**ದೃಶ್ಯಂತೇ ನ ಮೋಹಸುತಾ ದೋಷಾ ದಾಸಾನಾಂ ಸತ್ಯ ತವ ಭಕ್ತಾನಾವ್ ॥ ೩೧ ॥**

ದಾಸಸತ್ಯನೇ, ನಿನ್ನ ಭಕ್ತರಲ್ಲಿ ಅಹಂಕಾರ, ಮದ, ಈರ್ಷ್ಯೆ, ಮಾತ್ಸರ್ಯ, ದಂಭ, ಅಸೂಯೆ, ಭಯ, ಕ್ರೋಧ, ಲೋಭ ಮೊದಲಾದ ಮೋಹಪರಿಣಾಮಗಳೊಂದೂ ಕಾಣಿಸುವುದಿಲ್ಲ.

**ಯೇಷಾಂ ಮತಿರಿತರಮುಖೀ ಕಾಲಃ ಸಕಲೋಽಪಿ ತೇಷಾಂ ಕಲಿವಿಸ್ತಾರಃ ।**
**ಯೇ ತವ ಪದೇ ಪ್ರವಣಾ ನಾಸ್ತಿ ಕಲಿರ್ನಾಗಪತಿನಗರಪತೇ ತೇಷಾವ್ ॥ ೩೨ ॥**

ನಾಗಪತಿನಗರದೊಡೆಯನೇ, ನಿನ್ನನ್ನು ಬಿಟ್ಟು ಇತರ ವಿಷಯಗಳಲ್ಲಿ ಯಾರ ಬುದ್ಧಿಯು ಮಗ್ನವಾಗಿರುವುದೋ ಅವರು ಬದುಕುವ ಕಾಲವೆಲ್ಲ ಕಲಿಗಾಲದ ವಿಸ್ತಾರವೇ. ಆದರೆ ನಿನ್ನ ಪದಪದ್ಮಗಳಲ್ಲಿ ನೆಟ್ಟ ಮನಸ್ಸುಳ್ಳವರಿಗೆ ಮಾತ್ರ ಎಂದಿಗೂ ಕಲಿಗಾಲವೆಂಬುದೇ ಇಲ್ಲ.

**ಅತ್ಯಾಸನ್ನವಿನಾಶಾ ಅಚ್ಯುತ ಪಶ್ಯಂತಿ ತಾವಕೇ ಭಕ್ತಜನೇ।**
**ಮೋಕ್ಷರುಚೀನಾಂ ಸುಮಾರ್ಗೇ ಮೂಢಾ ದಿವಸಕರಮಂಡಲ ಇವ ಛಿದ್ರಮ್ ॥ ೩೩ ॥**

ಮೋಕ್ಷಾಭಿಲಾಷೆಯುಳ್ಳವರು ಹೋಗತಕ್ಕ ಶುಭಕರವಾದ ಅರ್ಚಿರಾದಿ ಮಾರ್ಗದ ಮೊದಲನೆಯ ಆತಿವಾಹಿಕನಾದ ಸೂರ್ಯದೇವನ ಮಂಡಲದಲ್ಲಿ ಮೂಢರು ಛಿದ್ರವನ್ನು ಕಾಣುವಂತೆ, ಎಲೈ ಅಚ್ಯುತನೆ, ವಿನಾಶ ಸಮೀಪಿಸಿದವರಿಗೆ ನಿನ್ನ ಭಕ್ತ ಜನರಲ್ಲಿ ದೋಷಗಳನ್ನು ಕಾಣುತ್ತಾರೆ.

**ನಿತ್ರುಟಿತದುರ್ಮಾನಘನಾನಿರ್ಮಲಗುಣಘಟಿತತಾರಕಾಪ್ರಾಗ್ಭಾರಾಃ**
**ಭಾಸಮಾನಭಕ್ತಿಜ್ಯೋತ್ಸ್ನಾ ನತಸತ್ಯ ಸ್ಫುರಂತಿ ನಭೋನಿಭಾಸ್ತವ ಭಕ್ತಾಃ ॥ ೩೪ ॥**

ನತಸತ್ಯನೇ, ಕತ್ತರಿಸಿ ಹಾಕಿದ ದುರಭಿಮಾನದ ಮೋಡಗಳುಳ್ಳ, ಪ್ರಕಾಶಿಸುವ ಸದ್ಗುಣಗಳಿಂದಾದ ನಕ್ಷತ್ರಗಳ ಗೊಂಚಲುಳ್ಳ, ಬೆಳಬೆಳಗುವ ಭಕ್ತಿಯ ಬೆಳದಿಂಗಳುಳ್ಳ ನಿನ್ನ ಭಕ್ತರು ಮೋಡಗಳಿಲ್ಲದ ನಿರ್ಮಲವಾದ ನಕ್ಷತ್ರಗಳಿಂದಲಂಕೃತವಾದ ಮತ್ತು ಪ್ರಕಾಶ ಚೆಲ್ಲುವ ಬೆಳದಿಂಗಳುಗಳಿಂದ ಕೂಡಿದ ನಿರ್ಮಲಾಕಾಶದೋಪಾದಿಯಲ್ಲಿ ವಿರಾಜಿಸುತ್ತಾರೆ.

**ನ ಖಲು ಯಮವಿಷಯೇ ಗತಿರ್ನತಸತ್ಯ ಪದಾಂಬುಜಂ ತವಪ್ರಪನ್ನಾನಾಮ್ ॥**
**ಸ್ಖಲಿತಾನಾಮಪಿ ಯಥಾಯೋಗ್ಯಂ ಶಿಕ್ಷಾ ಶುದ್ಧಾಂತಕಿಂಕರಾಣಾಮಿವ ಲಘ್ವೀ ॥ ೩೫ ॥**

ನತಸತ್ಯನೇ, ನಿನ್ನ ಪಾದಾರವಿಂದಗಳ ಶರಣು ಹೋದವರಿಗೆ ಯಮಲೋಕಗಮನವೆಂಬುದೇ ಇಲ್ಲ. ಅಂಥ ಶರಣಾಗತರು ಎಡವಿ ತಪ್ಪು ಮಾಡಿದರೂ ಅಂತಃಪುರದ ಪರಿಚಾರಕರಿಗೆ ಕೊಡುವಂತೆ ಬಹಳಲಘುವಾದ ಶಿಕ್ಷೆಯನ್ನು ಮಾತ್ರ ಕೊಡುವೆ.

**ಕರ್ಮಗತಿದೋಷದುಃಖಿತಾಃ ಕೃತಾಂತಭ್ರುಕುಟೀಭುಜಂಗೀ ದರ್ಶನತ್ರಸ್ತಾಃ ।**
**ಅರ್ಚಂತಿ ತವ ಚರಣಾವಚ್ಯುತ ಪ್ರಭ್ರಷ್ಟಮನ್ಮಥರಸಾಸ್ವಾದಾಃ ॥ ॥ ೩೬ ॥**

ತಮ್ಮ ತಮ್ಮ ಕರ್ಮಗತಿಯ ದೋಷಗಳಿಂದ ದುಃಖಗೊಂಡವರೂ, ಯಮನ ಹುಬ್ಬುಗಂಟುಗಳೆಂಬ ನಾಗಿಣಿಯ ದರ್ಶನದಿಂದ ತಲ್ಲಣಿಸಿದವರೂ ಕಾಮಸುಖಾಸ್ವಾದಗಳನ್ನೆಲ್ಲಾ ತೊರೆದು ನಿನ್ನ ಪಾದಗಳನ್ನು ಆರ್ತಿಯಿಂದ ಪೂಜಿಸುತ್ತಾರೆ.

**ಅಲಗತಿ ತವ ಚರಣಾವಚ್ಯುತ ವಿಧಿನಾಪ್ಯರ್ಚನಾಽಽಚರಿತಾ ।**
**ಐಕಾಂತಿ ಪ್ರಯುಕ್ತಾ ಶೇಷಾಮಿವ ಸ್ವಯಂ ಶಿರಸಾ ಪ್ರತಿಗೃಹ್ಣಾಸಿ ತಾಮ್ ॥ ೩೭ ॥**

ಬ್ರಹ್ಮದೇವನಿಂದ ಸಮರ್ಪಿಸಲ್ಪಟ್ಟ ಪೂಜೆಯೂ ನಿನ್ನ ಪಾದ ಪದ್ಮಗಳಲ್ಲಿಯೇ ಸೇರುವುದು. ಆದರೆ ನಿನ್ನೊಬ್ಬನನ್ನೇ ಉಪಾಯೋಪಾಯವೆಂದು ತಿಳಿದ ಭಕ್ತಾಗ್ರಣಿಗಳ ಪೂಜೆಯನ್ನು, ಶೇಷವಸ್ತ್ರವನ್ನು ಹೇಗೋ ಹಾಗೆ ಶಿರಸ್ಸಿನಿಂದ ನೀನೇ ಧರಿಸುತ್ತೀಯೇ.

**ತವ ಮುಖಜ್ಯೋತ್ಸ್ನಾದ್ರಾವಿತಮಾನಸಶಶಿಕಾಂತಪ್ರವಾಹ ಸನ್ನಿಭಬಾಷ್ಪಾನ್ ।**
**ಅಚ್ಯುತ ನ ಮುಂಚಸಿ ಭಕ್ತಾನ್ ಕದಂಬಗೋಳನಿಭಕಂಟಕಾಯಮಾನನಿಜಾಂಗಾನ್ ॥ ೩೮ ॥**

ನಿನ್ನ ಮುಖ ಮಂಡಲದ ಕಾಂತಿಯೆಂಬ ಬೆಳದಿಂಗಳಿನಿಂದ ಕರಗಿದ ಮನಸ್ಸೆಂಬ ಚಂದ್ರಕಾಂತದ ಪ್ರವಾಹದಂತೆ ಆನಂದ ಭಾಷ್ಪಗಳನ್ನು ಸುರಿಸುವವರೂ ಕದಂಬ ವೃಕ್ಷದಂತೆ ಮೈಮೇಲೆ ಮುಳ್ಳಿನಂತೆದ್ದ ರೋಮಾಂಚನವನ್ನುಳ್ಳವರೂ ಆದ ಭಕ್ತರನ್ನು ಎಂದಿಗೂ ನೀನು ಕೈ ಬಿಡುವವನಲ್ಲ.

**ಸರ್ವೇಷ್ವಪಿ ನಿರ್ವೈರಾಃ ಶರಣಾಗತಸತ್ಯ ಗೃಹೀತಶಾಶ್ವತಧರ್ಮಾಃ ।**
**ಗತಸಂಗಾಸ್ತವ ಭಕ್ತಾ ಯಾಂತಿ ತ್ವಾಮೇವ ದುರ್ಲಭಮಿತರೈಃ ॥**
**॥ ೫೯ ॥**

ಯಾರಲ್ಲಿಯೂ ದ್ವೇಶವೇ ಇಲ್ಲದವರಾಗಿಶಾಶ್ವತಧರ್ಮವನ್ನು ಪಾಲಿಸುವವರೂ ಅನಾಸಕ್ತರೂ ಆದ ನಿನ್ನ ಭಕ್ತರು ಇತರರಿಂದ ಪಡೆಯಲು ದುರ್ಲಭನಾದ ನಿನ್ನನ್ನೇ ಸೇರುತ್ತಾರೆ.

**ಅಹಿಪತಿನಗರೇಂದ್ರ ತ್ವಾಮಾಸನ್ನಮಪಿ ಗಗನಮಿವ ಸದಾ ದುರ್ಗ್ರಹಮ್ ।**
**ವಿಷಯೇಷು ವಿಲಗಂತಸ್ತ್ವರಮಾಣಾ ಅಪಿ ನ ಲಭಂತೇ ಡೋಳಾಯಮಾನಮನಸಃ ॥ ೬೦ ॥**

ಎಲೈ ಅಹಿಪತಿ ನಗರದೊಡೆಯನೇ, ಆಕಾಶದಂತೆ ಸದಾ ಸಮೀಪದಲ್ಲಿಯೇ ಇದ್ದರೂ ಹಿಡಿಯಲಸಾಧ್ಯನಾದ ನಿನ್ನನ್ನು ವಿಷಯ ಸುಖಗಳಲ್ಲಿ ಮುಳುಗಿದ ಚಂಚಲ ಮನಸ್ಕರು ತ್ವರೆಯಿಂದ ಕೂಡಿದರೂ ಪಡೆಯಲಾರರು.

**ಭಕ್ತಾಸ್ತಾವಕಸೇವಾರಸಭರಿತಾಃ ಸಕಲರಕ್ಷಣೋತ್ಸುಕರುಚಿನಾ ।**
**ಕರಣಾನಿ ಧರಂತಿ ಚಿರಂ ಕಾಂಕ್ಷಿತಮೋಕ್ಷಾ ಅಪ್ಯಚ್ಯುತ ತ್ವಯಾ ಸ್ಥಾಪಿತಾಃ ॥ ೬೧ ॥**

ಅಚ್ಯುತನೇ, ನಿನ್ನ ಸೇವೆಯ ಸಂತೋಷದಿಂದ ತುಂಬಿದ ಭಕ್ತೋತ್ತಮರು ಮೋಕ್ಷವನ್ನು ಬಯಸುವವರಾದರೂ ಸಕಲರನ್ನೂ ಕಾಪಾಡಬೇಕೆಂಬ ಆಸೆಯುಳ್ಳ ನಿನ್ನಿಂದ ಇಲ್ಲಿ ಇರಿಸಲ್ಪಟ್ಟವರಾಗಿ ದೀರ್ಘಕಾಲ ದೇಹಧಾರಣೆ ಮಾಡುತ್ತಾರೆ.

**ಸ್ಥಿರಗುಣಗಿರಿಜನಿತೈಃಸಂತಾರಯಸಿ ನತಸತ್ಯ ನಿಜಭಕ್ತೈಃ ।**
**ಜನ್ಮಪರಿಪಾಟೀಜಲಧಿಂಜಂಗಮಸ್ಥಿರಸೇತುದರ್ಶನೀಯೈರ್ಜನಾನ್ ।**
**॥ ೬೨ ॥**

ಎಲೈ ನತಸತ್ಯನೇ, ಅಚಲವಾದ ಸದ್ಗುಣ ಪರ್ವತಗಳಿಂದ ರಚಿತವಾಗಿ ಸಂಚರಿಸುವ ಸುಭದ್ರವಾದ ಸೇತುವೆಗಳಂತೆದರ್ಶನೀಯರಾದ ನಿನ್ನ ಭಕ್ತರುಗಳ ಮೂಲಕ ಈ ಲೋಕದ ಜನರನ್ನು ಜನ್ಮಪರಂಪರೆಯ ಘೋರ ಸಾಗರದಿಂದ ದಾಟಿಸುವೆ.

**ಪ್ರಶಮಿತಭವಾಂತರಭಯಾಃ ಪ್ರಾಪ್ತಂ ಹಿತಮಿತಿ ಪರಿಪಶ್ಯಂತಃ ।**
**ಭಾವಯಂತಿ ತವ ಭಕ್ತಾಃ ಪ್ರಿಯಾತಿಥಿಮಿವ ನತಸತ್ಯ ಪಶ್ಚಿಮದಿವಸಮ್ ॥ ೬೩ ॥**

ನತಸತ್ಯನೇ, ಪುನರ್ಜನ್ಮಗಳ ಭಯವನ್ನು ಕಳೆದು ಕೊಂಡವರೂ ತಾನಾಗಿ ಒದಗಿದುದನ್ನು ಹಿತವೆಂದೇ ಭಾವಿಸುವವರೂ ಆದ ನಿನ್ನ ಭಕ್ತರು ತಮ್ಮ ಇಹ ಜೀವನದ ಕೊನೆಯ ದಿನವನ್ನು ಪ್ರಿಯನಾದ ಅತಿಥಿಯ ಬರವನ್ನು ಹೇಗೋ ಹಾಗೆ ಪ್ರೀತಿಯಿಂದ ಸ್ವಾಗತಿಸುವರು.

**ಪ್ರಕಟತಿಮಿರೇ ಭುವನೇ ಪಾತ್ರಪ್ರತಿಷ್ಠಾಪಿತಪರಮಜ್ಞಾನಪ್ರದೀಪಾಃ ।**
**ನೀಯಂತೇಽಚ್ಯುತ ತ್ವಯಾ ನಿಜಂಪದಂ ಸದಾ ಸ್ವಯಂಪ್ರಭಂಕೃತಕಾರ್ಯಾಃ ॥೬೪॥**

ಅಚ್ಯುತನೇ, ಕತ್ತಲಿಡಿದಿರುವ ಈ ಲೋಕದಲ್ಲಿ ಪ್ರಶಸ್ತವಾದ ಜ್ಞಾನ ದೀಪಗಳನ್ನು ತಕ್ಕ ಕಡೆಗಳಲ್ಲಿ ನೆಲೆಗೊಳಿಸಿದವರೂ ತಾವು ಮಾಡಬೇಕಾದ ಕಾರ್ಯವನ್ನು ಮಾಡಿ ಮುಗಿಸಿದವರೂ ಆದ ಭಕ್ತರನ್ನು ಸ್ವಯಂಪ್ರಕಾಶವಾದ ನಿನ್ನ ಪರಮ ಪದಕ್ಕೆ ನೀನೇ ಕರೆದುಕೊಂಡು ಹೋಗುತ್ತೀಯೆ.

**ಧೃಢತೀವ್ರಭಕ್ತಿನಯನಾಃ ಪರಿಪಶ್ಯಂತೋಽಹೀಂದ್ರಪುರನಾಥತ್ವಾಂ।**
**ಪ್ರಾಪ್ತಾಸ್ತವ ಸಾಯುಜ್ಯಂ ಪಂಕ್ತಿಂ ಪೂರಯಂತಿ ಪನ್ನಗೇಂದ್ರಮುಖಾನಾಮ್ ॥ ೬೫ ॥**

ಎಲೈ ಅಹೀಂದ್ರಪುರದೊಡೆಯನೇ, ಧೃಢವೂ ಉತ್ಕಟವೂ ಆದ ಭಕ್ತಿತುಂಬಿದ ಕಣ್ಣುಗಳಿಂದ ನಿನ್ನನ್ನು ಚೆನ್ನಾಗಿ ಸಂದರ್ಶಿಸುವವರಾಗಿ ನಿನ್ನ ಭಕ್ತರು ನಿನ್ನ ಸಾಯುಜ್ಯವನ್ನು ಪಡೆದು ಆದಿಶೇಷನೇ ಮೊದಲಾದ ನಿತ್ಯಸೂರಿಗಳ ಶ್ರೇಣಿಯನ್ನು ತುಂಬುತ್ತಾರೆ.

**ಸಂಸತಸುಲಭಮಚ್ಯುತ ಸಮಾಧಿಸೋಪಾನಕ್ರಮವಿಲಂಬ ವಿಮುಖಿತಾಃ ।**
**ಶರಣಂ ಗತ್ವಾ ತ್ವಾಂ ಮುಕ್ತಾ ಮುಚುಕುಂದಕ್ಷತ್ರಬಂಧುಪ್ರಮುಖಾಃ ॥ ೬೬ ॥**

ಅಚ್ಯುತನೇ, ಯಮ ನಿಯಮ ಮೊದಲಾದ ಸಮಾಧಿಯ ಹಂತಗಳಕ್ರಮದಿಂದ ಒದಗುವ ವಿಳಂಬವನ್ನು ತಾಳಲಾರದೆ ಮುಚುಕುಂದ, ಕ್ಷತ್ರಬಂಧು ಮೊದಲಾದವರು ನಮಿಸಿದವರಿಗೆ ಸುಲಭನಾದ ನಿನ್ನನ್ನೇ ಶರಣುಹೋಗಿ ಮೋಕ್ಷವನ್ನು ಪಡೆದರು.

**ದೇವಾನಾಂ ಪಶುಸಮಾನೋಜಂತುರ್ಗತ್ವಾ ದೇವನಾಥ ತವ ಪದಮ್**
**ತೈರೇವ ಸರ್ವೈಃ ಸಂಸರಮಾಣೈರ್ಭವತಿ ಸದಾ ದತ್ತಬಲಿಃ ॥ ೬೭ ॥**

ಎಲೈ ದೇವನಾಥ, ಮೊದಲು ದೇವತೆಗಳಿಗೆ ಪಶುಸಮಾನನಾದ ಜೀವನು ನಿನ್ನನ್ನು ಸೇರಿದ ಮೇಲೆ ಇನ್ನೂ ಸಂಸಾರ ಮಂಡಲದಲ್ಲಿಯೇ ತೊಳಲುತ್ತಿರುವ ಆ ದೇವತೆಗಳಿಂದಲೇ ಸದಾ ಪೂಜಿಸಲ್ಪಡುತ್ತಾನೆ.

**ಮೋಹಾಂಧಕಾರಮಹಾರ್ಣವಮೂರ್ಛಿತಮಾಯಾ ಮಹಾರಜನಿಪ್ರತ್ಯೂಷಃ ||**
**ಅಚ್ಯುತ ತವ ಕಟಾಕ್ಷೋ ವಿಮುಕ್ತಿಪ್ರಸ್ಥಾನಪ್ರಥಮಪರಿಕರ ಬಂಧಃ || ೬೮ ||**

ಮೋಹವೆಂಬ ಕತ್ತಲೆಯ ಮಹಾ ಸಮುದ್ರದಿಂದ ಮೂರ್ಛಿತವಾದ ಮಾಯೆಯೆಂಬ ಮಹಾ ರಾತ್ರಿಗೆ ಮುಂಜಾವಿನಂತೆಯೂ, ಮೋಕ್ಷ ಪ್ರಯಾಣಕ್ಕೆ ಮೊಟ್ಟಮೊದಲು ಟೊಂಕ ಕಟ್ಟಿಕೊಂಡತೆಯೂ, ನಿನ್ನ ಕಡೆಗಣ್ಣನೋಟವು ಶೋಭಿಸಿದೆ.

**ಮೋಕ್ಷಸುಖವೃಕ್ಷಮೂಲಂ ಮೋಹಜರಾತುರಮಹಾರಸಾಯನಪ್ರವರಮ್ |**
**ಸಕಲಕುಶಲೈಕಕ್ಷೇತ್ರಂ ಕಿಂಕರಸತ್ಯ ತವ ಕೀರ್ತನಮಮೃತನಿಭಮ್ || ೬೯ ||**

ಹೇ ಕಿಂಕರ ಸತ್ಯ, ನಿನ್ನದಿವ್ಯ ನಾಮ ಸಂಕೀರ್ತನೆಯು ಮೋಕ್ಷಾನಂದವೆಂಬ ವೃಕ್ಷದ ತಾಯಿಬೇರು; ಮೋಹ, ಮುಪ್ಪು, ರೋಗಕ್ಕೆ ಸಿದ್ಧೌಷಧಿಯಾದ ಮಹಾರಸಾಯನ; ಅಮೃತದಂತೆ ಸ್ವಾದುತಮವಾದದು; ಸರ್ವವಿಧವಾದ ಮಂಗಳಗಳಿಗೂ ಏಕಾಶ್ರಯವಾದದು.

**ನಾಸ್ತ್ಯಭಿಕ್ರಮನಾಶೋ ವಿಚ್ಛೇದೇಽಪಿ ನ ಪ್ರತ್ಯವಾಯಪ್ರಸಂಗಃ |**
**ಸ್ವಲ್ಪಾಪಿ ತವ ಸಪರ್ಯಾ ರಕ್ಷತ್ಯಚ್ಯುತ ಮಹತ್ತರಾದ್ಭಯಾಂತ್ || ೭೦ ||**

ಅಚ್ಯುತನೇ, ಸ್ವಲ್ಪ ಮಟ್ಟಿಗೆ ಮಾಡಲ್ಪಟ್ಟ ಅತ್ಯಲ್ಪವಾದ ನಿನ್ನ ಆರಾಧನೆಯೂ, ಮಹತ್ತರವಾದ ಭಯದಿಂದ ಕಾಪಾಡ ಬಲ್ಲುದು. ಅದನ್ನು ಆರಂಭಿಸಿ ಮುಗಿಸದಿದ್ದರೂ ದೋಶವಿಲ್ಲ. ಮಧ್ಯೇ ಮಧ್ಯೇ ಬಿಟ್ಟು ಬಿಟ್ಟು ಮುಂದುವರಿಸಿದರೂ ಅಪಾಯದ ಪ್ರಸಂಗವಿಲ್ಲ. ಹೀಗೆ ಅಪಾಯ ರಹಿತವೂ ಫಲಪ್ರದವೂ ಆದುದು ನಿನ್ನ ಸೇವೆ.

**ಅಪ್ರಸಾದೇ ಅಪ್ರಸನ್ನಾಸ್ತವ ಪ್ರಸಾದೇ ದಾಸಸತ್ಯ ಪ್ರಸನ್ನಾಃ |**
**ಆರಾಧ್ಯಾ ಭವಂತಿ ಪರೇ ಕಿಂ ತೈಃ ಪ್ರಸಂಗಲಂಭಿತಪ್ರಭಾವೈಃ || ೭೧ ||**

ಇತರ ದೇವತೆಗಳು ನೀನು ಒಲಿಯದಿದ್ದರೆ ಒಲಿಯರು. ನೀನು ಪ್ರಸನ್ನನಾದರೆ ಅವರೂ ಪ್ರಸನ್ನರಾದಂತೆಯೇ. ನಿನ್ನ ಅನುಗ್ರಹ ಪ್ರಸಂಗದಿಂದಲೇ ಪ್ರಭಾವವನ್ನು ಪಡೆದುಕೊಂಡಿರುವ ಆ ಇತರರ ಪೂಜೆಯಿಂದ ನಮಗೇನಾಗಬೇಕಾಗಿದೆ?

**ಇತರತ್ರಿದಶಾಃ ಪ್ರಸನ್ನಾಃ ಕಿಂಕರಸತ್ಯ ಮಮ ಕಿಂನು ಕರಿಷ್ಯಂತಿ ಹಿತಮ್ ।**
**ನೀಹಾರಘನಶತೈರ್ನ ಖಲು ಪೂರ್ಯತೇ ಕಥಮಪಿ ಚಾತಕ ತೃಷ್ಣಾ ॥ ೭೨ ॥**

ಕಿಂಕರರಿಗೆ ಸತ್ಯ ಸ್ವರೂಪಿಯಾದವನೇ, ಇತರ ದೇವತೆಗಳು ಪ್ರಸನ್ನರಾದರೆ ತಾನೇ ನನಗೇನು ಹಿತವನ್ನು ಮಾಡಬಲ್ಲರು? ಮಂಜಿನ ನೂರಾರು ಪಟಲಗಳಿಂದ ಚಾತಕ ಪಕ್ಷಿಯ ಬಾಯಾರಿಕೆಯು ನೀಗುವುದೇ?

**ಅನುಗತಸುಖಮೃಗತೃಷ್ಣಾ ಅಚ್ಯುತ ವಿಶ್ರಾಮ್ಯತಿ ತವ ಮಾಮಕ ತೃಷ್ಣಾ ।**
**ಪ್ರವಾಹೇಷು ಪ್ರಸೃತಾಯಾಆಶ್ರಿತಪ್ರವಹದ್ಘನ ಕೃಪಾಸರಿತಃ॥ ೭೩ ॥**

ಅಚ್ಯುತನೇ, ಸುಖವೆಂಬ ಮರೀಚಿಕೆಯನ್ನು ಬೆಂಬಿಡಿದು ಸಾರಿದ ನನ್ನ ಆಶಾ ದಾಹವು ಆಶ್ರಿತರೆಡೆಗೆ ಹರಿದುಬರುವ ನಿನ್ನ ದಯಾಪೂರದಿಂದ ಶಮನವಾಗುತ್ತದೆ.

**ವಿಕಲಸಕಲಾಂಗ ವಿಷಮಾನ್ ಧರ್ಮಾನ್ ನತಸತ್ಯ ಧ್ವಜನಿಭಾನ್ ಧಾರಯನ್ ।**
**ಕಾಂತಾರಪಾಂಥಕ ಇವ ಸ್ಖಲಚ್ಚರಣೋಽಸ್ಮಿ ಕಾತರವಿಶೀರ್ಯಮಾಣಃ ॥ ೭೪ ॥**

ಎಲೈ ನತಸತ್ಯನೇ, ಎಲ್ಲ ಅಂಗಗಳೂ ಕಡಿಮೆಯಾಗಿ ವಿಷಮವಾದ ಧರ್ಮಗಳನ್ನು ಧ್ವಜ ಚಿಹ್ನೆಗಳೋಪಾದಿಯಲ್ಲಿ ಧರಿಸಿದವನಾಗಿ ಕಾತರತೆಯಿಂದ ಸೀಳಲ್ಪಡುತ್ತಿರುವ ನಾನು ಅಡವಿಯ ದಾರಿಹೋಕನಂತೆ ಕಾಲೆಡವುವವನಾಗಿದ್ದೇನೆ.

**ಸ್ಥಿರ ಧರ್ಮವರ್ಮಸ್ಥಗಿತಮಧರ್ಮಪ್ರವಣಾನಾಮಗ್ರಸ್ಕಂಧ ಪ್ರವೃತ್ತಮ್ ।**
**ಅಘಟಮಾನಮಪ್ರತೀಸಾರಮಚ್ಯುತ ಮಾಂ ಹಸಸಿ ನೂನಂ ಲಕ್ಷ್ಮೀ ಸಮಕ್ಷಮ್ ॥ ೭೫ ॥**

ಅಚ್ಯುತನೇ, ಶಾಶ್ವತವಾದ ಧರ್ಮ ಕಂಚುಕದ ಮುಸುಕನ್ನು ಹಾಕಿಕೊಂಡವನೂ ಅಧರ್ಮ ಪ್ರವರಣರಲ್ಲಿ ಮೊದಲಿಗನೂ ಪ್ರತಿಕ್ರಿಯೆ ಮಾಡಲಸಾಧ್ಯನೂ ಆದ ನನ್ನನ್ನು ಲಕ್ಷ್ಮೀದೇವಿಯ ಮುಂದೆ ನಿಜವಾಗಿಯೂ ಪರಿಹಾಸ್ಯ ಮಾಡುವಿ!

**ತರಿತುಮಚ್ಯುತ ದುರಿತಮಸ್ಮಿನ್ ದೇಹೇ ಏಕ ದಿವಸೇಪಿ ಕೃತಮ್ ।**
**ಕಾಲೋಽಲಂ ನ ಸಕಲಃ ಕರುಣಾಯಾಸ್ತವ ಪೂರ್ಣಪಾತ್ರಮಸ್ಮಿ ಯಮ್ ॥ ೭೬ ॥**

ಅಚ್ಯುತ, ಈ ದೇಹದಿಂದ ಒಂದೇ ಒಂದು ದಿನದಲ್ಲಿ ಮಾಡಿದ ಪಾಪವನ್ನು ಕಳೆದುಕೊಳ್ಳಲೂ ಮುಂದೆ ಬರುವ ಕಾಲವೆಲ್ಲವೂ ಸಾಕಾಗದು. ಆದರಿಂದ ನಾನು ನಿನ್ನ ದಯೆಗೆ ಪೂರ್ಣವಾಗಿ ಅರ್ಹನಾಗಿದ್ದೇನೆ.

**ಅಚ್ಯುತ ತವ ಗುಣಾನಾಂ ಮಮ ದೋಷಾಣಾಮಪಿ ನಾಸ್ತಿ ಕುತ್ರಾಪಿ ಗಣನಾ।**

**ತಥಾಪಿ ಜಯಃ ಪ್ರಥಮಾನಾಮಧಿಕಂ ಲೀನಾನಾಂ ಭವತಿ ನ ಖಲು ದೌರ್ಬಲ್ಯಮ್ ॥ ೭೭ ॥**

ನಿನ್ನ ಗುಣಗಳು ಎಂದಿಗೂ ಹೇಗೆ ಎಣಿಕೆಗೆ ಸಿಕ್ಕಲಾರವೋ ಹಾಗೆಯೇ ನನ್ನ ದೋಷಗಳೂ ಎಣಿಕೆಗೆ ಸಿಕ್ಕಲಾರವು. ಆದರೂ ಮೊದಲನೆಯದಾದ ನಿನ್ನ ಗುಣಗಳಿಗೇ ಗೆಲುವುಂಟಾಗುತ್ತದೆ. ಅಧಿಕರೊಡನೆ ಸೇರಿದವರಿಗೆ ದೌರ್ಬಲ್ಯವಿರುವುದಿಲ್ಲವಷ್ಟೆ?

**ರಾತ್ರಿಂ ದಿವಸಮಚ್ಯುತ ತ್ರುಟಿತಪತಂತ್ಯಾಯುರ್ದ್ರುಮಖಂಡಾನಿ।**
**ದೃಷ್ಟ್ವಾಽಪಿ ದೃಪ್ತಮನಸಂ ಬಾಲಮಿದಾನೀಮಪಿ ಭರಸ್ವಮಾಮ-ಪ್ರಮತ್ತಃ ॥ ೭೮ ॥**

ಎಲೈ ಅಚ್ಯುತನೇ, ಹಗಲಿರುಳೂ ತತ್ತರಿಸಿ ಬೀಳುತ್ತಾ ಶಿಥಿಲವಾಗುತ್ತಿರುವ ಆಯುಸ್ಸೆಂಬ ವೃಕ್ಷಖಂಡವನ್ನು ನೋಡಿಯೂ ಕೂಡ ದರ್ಪದಿಂದ ಕೂಡಿದ ಮನಸ್ಸುಳ್ಳವನೂ ಬಾಲನೂ ಆದ ನನ್ನನ್ನು ಈಗಲಾದರೂ ಎಚ್ಚರಿಕೆಯಿಂದ ಕಾಪಾಡು

**ನಿಃಶ್ವಾಸಶಂಕನೀಯೇ ದೇಹೇ ಪಟಲಾಂತಸಲಿಲಬಿಂದುಸದೃಕ್ಷೇ।**
**ಜಾನಾಸಿ ನತಸತ್ಯ ತ್ವಂ ಮಾಂ ಜರತ್ಕರಣೇಽಪಿ ದೀರ್ಘಯೌವನ ತೃಷ್ಣಮ್ ॥ ೭೯ ॥**

ನತ ಸತ್ಯನೇ, ಹೊರಡುವ ಒಂದೊಂದುಉಸಿರೂ ಕೊನೆಯದೋಎಂದು ಶಂಕಿಸುವಂಥ, ಬಟ್ಟೆಯಂಚಿನಿಂದ ಕೆಳಗೆ ಬೀಳುವುದರಲ್ಲಿರುವ ಜಲಬಿಂದುವಿಗೆ ಸಮಾನವಾದಂಥ ಈ ಶರೀರದಲ್ಲಿ ಇಂದ್ರಿಯಗಳು ಶಿಥಿಲವಾದರೂ ಆಶೆಗೆ ಮಾತ್ರ ಚಿರ ತಾರುಣ್ಯವಿರುವ ನನ್ನನ್ನು ನೀನು ತಿಳಿದೇ ಇದ್ದೀಯೆ.

**ಅಜ್ಞಾತನಿಜಕರ್ತವ್ಯಂ ತಿಲಾಗ್ರಜ್ಞಾತೇಷು ಮಾಮಪಿ ಪ್ರತಿಕೂಲ ಗತಿಮ್।**

**ಇತಿನಿಜಸ್ವಭಾವವ್ರೀಳಿತಂ ಹಾತುಂ ದಾಸಾನಾಂಸತ್ಯ ನ ಖಲು ತವ ಯುಕ್ತಮ್ ॥ ೮೦ ॥**

ದಾಸಸತ್ಯನೇ, ನನ್ನ ಕರ್ತವ್ಯವೇನೆಂಬುದನ್ನೇ ಅರಿಯದವನೂ, ಎಳ್ಳಿನ ಮೊನೆಯಷ್ಟು ತಿಳಿದ ವಿಚಾರಗಳಲ್ಲಿಯೂ ಪ್ರತಿಕೂಲವಾದ ಆಚರಣೆಯುಳ್ಳವನೂ ಹೀಗೆ ನನ್ನ ಸ್ವಭಾವಕ್ಕಾಗಿ ಈಗ ಲಜ್ಜೆಗೊಂಡವನೂ ಆದ ನನ್ನ ಕೈ ಬಿಡುವುದು ನಿನಗೆ ತರವಲ್ಲವು.

**ಕೋಽಹಂ ಕಿಂ ಕರಣೀಯಂ ಪರಿಹರಣೀಯಮಪಿ ಕಿಮಿತಿ ಜಾನಾಸಿ ಸರ್ವಮ್ ।**

**ಶಕ್ನೋಷಿ ಚ ತದ್ಧಿತಂ ಮಮ ತ್ರಿದಶೇಶ್ವರ ಕುರುಷ್ವ ನಿಜಹೃದಯ ನಿಕ್ಷಿಪ್ತಮ್ ॥ ೮೧ ॥**

'ನಾನಾರು' ನಾನೇನು ಮಾಡಬೇಕು. 'ನಾನೇನು ಬಿಡಬೇಕು' ಎಂಬುದನ್ನೆಲ್ಲಾ ನೀನು ಅರಿತಿರುವೆ. ಅದರಿಂದ, ಎಲೈ ದೇವತೆಗಳೊಡೆಯನೇ, ನಿನ್ನ ಮನಸ್ಸಿನಲ್ಲಿ ನಿಗೂಢವಾಗಿರುವಂತೆಯೇ ನನಗೆ ಹಿತವಾದುದನ್ನು ನಡೆಸಿಕೊಡು. ಹೀಗೆ ಮಾಡಲು ನೀನು ಸಮರ್ಥನೇ ಸರಿ.

**ಇದಾನೀಮುಪರ್ಯಪ್ಯಯಂ ಗುಣಗೃಹೀತೋ ದಾರುಪುತ್ರಕ ಇವ**
**ಪರವಶಃ ।**
**ತಸ್ಯಾಪಿ ಮಮ ತ್ರಿದಶೇಶ್ವರ ತ್ರಿಷ್ವಪಿ ಕರಣೇಷು ಭವ ಸುಖ**
**ಸಂಕಲ್ಪಃ ॥ ೮೨ ॥**

ಸೂತ್ರದಿಂದ ಹಿಡಿಯಲ್ಪಟ್ಟ ಮರದ ಗೊಂಬೆಯು ಹೇಗೋ ಹಾಗೆ ಗುಣಗೃಹೀತನಾದ ನಾನು ಇಂದೂ ಎಂದೆಂದೂ ನಿನಗೆ ಪರವಶನಾಗಿರುವಂತಾಗಲಿ. ಇಂಥ ನನಗೆ ತ್ರಿಕರಣಗಳಲ್ಲಿಯೂ ನೀನೇ ಸುಖಸಂಕಲ್ಪನಾಗು.

**ನಿಜಕರ್ಮನಿಗಳಯುಗಳಮಚ್ಯುತ ಕೃತ್ವಾ ಮಮ ಪ್ರಿಯಾಪ್ರಿಯ**
**ವರ್ಗೇ ।**
**ಕದಾ ಘೋರಕಳೇಬರಕಾರಾಗೃಹಕುಹರನಿರ್ಗತಂ ಕರಿಷ್ಯಸಿ**
**ಮಾಮ್ ॥ ೮೩ ॥**

ಅಚ್ಯುತನೇ, ನನ್ನ ಪಾಪಪುಣ್ಯಗಳೆಂಬ ಕರ್ಮ ಸಂಕೋಲೆಗಳೆರಡನ್ನೂ ನನ್ನ ಶತ್ರುಮಿತ್ರರುಗಳಲ್ಲಿ ವಿಭಾಗಿಸಿ, ಎಂದು ಶರೀರವೆಂಬ ಈ ಘೋರವಾದ ಸೆರೆಮನೆಯ ಗುಹೆಯಿಂದ ಹೊರಕ್ಕೆ ಬಿಡುಗಡೆ ಮಾಡಿಸುವೆ?

**ಹಾರ್ದೇ ತ್ವಯಿ ಕದಾ ವಿಶ್ರಾಂತಂ ಬ್ರಹ್ಮಧಮನಿಮಾರ್ಗಗಮಿ**
**ಷ್ಯಂತಮ್ ।**
**ದಿನಕರದತ್ತಾಗ್ರಕರಮಚ್ಯುತ ದ್ರಕ್ಷ್ಯಸಿ ದಯಿತಡಿಂಭಮಿವ**
**ಮಾಮ್ ॥ ೮೪ ॥**

ಹೃದಯಾಂತವರ್ತಿಯಾಗಿರುವ ನಿನ್ನಲ್ಲೇ ನೆಲಸಿದ ನನ್ನನ್ನು ಬ್ರಹ್ಮನಾಡೀ ಮುಖಾಂತರ ಹೊರಟು ಸೂರ್ಯನ ಕರಸ್ಪರ್ಶದಿಂದ ಮುಂದುವರಿಯುವಂತೆಮಾಡಿ, ಎಲೈ ಅಚ್ಯುತನೇ, ಪ್ರಿಯಕುಮಾರನನ್ನು ಹೇಗೋ ಹಾಗೆ ಎಂದು ಕಟಾಕ್ಷಿಸುವೆ?

**ಕದಾ ಅಮಾನವಾಂತಾ ಅಗ್ನಿಮುಖಾ ಆತಿವಾಹಿಕಾಸ್ತವಪುರುಷಾಃ।**
**ಅತಿಲಂಘಯಿಷ್ಯಂತಿ ಮಾಮಚ್ಯುತ ತಮೋಗಹನ ತ್ರಿಗುಣಮರು**
**ಕಾಂತಾರಮ್ ॥ ೮೫ ॥**

ಅಚ್ಯುತ, ಅಗ್ನಿದೇವನು ಮೊದಲಿನವನೂ ಅಮಾನವನು ಕೊನೆಯವನೂ ಆಗಿರುವ ನಿನ್ನ ಸೇವಕರಾದ ಆತಿವಾಹಿಕ ಪುರುಷರು ದಟ್ಟವಾದ ಕತ್ತಲೆಯುಳ್ಳ ಈ ಪ್ರಕೃತಿಯೆಂಬ ಮರಳ್ಗಾಡಿನಿಂದ ಎಂದು ನನ್ನನ್ನು ದಾಟಿಸುವರು?

**ಲಂಘಿತವಿರಜಾಸರಿತಂ ಲಂಭಿತಸದಾಶುದ್ಧಸತ್ತ್ವಮಯ ಸೌಮ್ಯ ತನುಮ್ ।**
**ಕೃತಬ್ರಹ್ಮಾಲಂಕಾರಂ ಕರಿಷ್ಯಸಿ ನತಸತ್ಯ ಕಿಂಕರಂ ಕದಾ ಮಾಮ್ ॥ ೮೬ ॥**

ನತಸತ್ಯನೇ, ವಿರಜಾನದಿಯನ್ನು ದಾಟಿಸಿ, ಸರ್ವಕಾಲದಲ್ಲಿಯೂ ಶುದ್ಧ ಸತ್ತ್ವಮಯವಾದ ಸೌಮ್ಯಶರೀರವನ್ನು ಪಡೆಯುವಂತೆ ಮಾಡಿ, ಬ್ರಹ್ಮಾಲಂಕಾರ ಮಾಡಿಸಿ ನನ್ನನ್ನು ಎಂದು ನಿನ್ನ ಕಿಂಕರನನ್ನಾಗಿ ಮಾಡಿಕೊಳ್ಳುವೆ?

**ಸಂಸಾರಸಾಗರಾದುತ್ಕ್ಷಿಪ್ತಂ ತ್ರಿದಶನಾಥ ಸ್ಫುರಿತಾಲೋಕಮ್**
**ಕದಾ ಕರಿಷ್ಯಸಿ ಹೃದಯೇ ಕೌಸ್ತುಭಮಣಿದರ್ಪಣಮಿವ ಲಕ್ಷ್ಮೀದೃಷ್ಟಮ್ ॥ ೮೭ ॥**

ಎಲೈ ತ್ರಿದಶರೊಡೆಯನೇ, ಸಾಗರದಿಂದುದ್ಧೃತವಾದ ಕೌಸ್ತುಭಮಣಿಯು ಪ್ರಕಾಶ ಚೆಲ್ಲುವಂತಾಗಿ ಲಕ್ಷ್ಮೀದೇವಿಯು ರನ್ನಗನ್ನಡಿಯಂತೆ ಅವಳ ದೃಷ್ಟಿಗೋಚರ ವಾಗಿ ಹೇಗೆ ಮಾಡಲ್ಪಟ್ಟಿತೋ ಹಾಗೆ ನನ್ನನ್ನೂ ಈ ಸಂಸಾರವೆಂಬ ಸಮುದ್ರದಿಂದ ಉದ್ಧರಿಸಿ ಪ್ರಕಾಶಯುತನನ್ನಾಗಿಮಾಡಿ ಎಂದು ಅವಳ ಕಟಾಕ್ಷಕ್ಕೊಳಪಡಿಸುವೆ?

**ಕದಾ ತವ ಪಾದಪದ್ಮೇ ಭವಿಷ್ಯಾಮಿ ನತಸತ್ಯ ಕೇಳಿ ಕ್ರಾಂತ ತ್ರಿಭುವನೇ ।**
**ಮದನರಿಪುಮಕುಟಮಂಡನ ಸುರಸರಿತ್ಸ್ರೋತಃ ಸೂಚಿತ ಮಧು ಪ್ರವಾಹೇ ॥ ೮೮ ॥**

ನತಸತ್ಯನೇ, ಮೂರು ಲೋಕಗಳನ್ನೂ ಲೀಲೆಯಿಂದ ಅಳೆದುಬಿಟ್ಟವು ನಿನ್ನ ಪಾದಪದ್ಮಗಳು. ಮನ್ಮಥಾರಿಯಾದ ಪರಶಿವನ ಶಿರಸ್ಸನ್ನಲಂಕರಿಸಿರುವ ದೇವಗಂ ಗೆಯ ಪ್ರವಾಹದಿಂದ ಸೂಚಿತವಾದ ಮಧುಪ್ರವಾಹವುಳ್ಳವು ಅವು. ಅಂಥ ಪಾದಪದ್ಮ ಗಳನ್ನೆಂದು ಸೇವಿಸಿ ನಾನು ಧನ್ಯನಾದೇನು!

**ಉಪನಿಷಚ್ಛಿರಃ ಕುಸುಮ ಮುತ್ತಂಸ್ಯ ತವ ಪದಾಂಬುಜಯು ಗಳಮ್ ।**
**ದಯಿತೋ ಭವಿಷ್ಯಾಮಿ ಕದಾ ದಾಸೋ ದಾಸಾನಾಂಸತ್ಯ ಸೂರಿಸದೃಕ್ಷಃ ॥ ೮೯ ॥**

ಉಪನಿಷತ್ತುಗಳು ತಮ್ಮ ಶಿರಸ್ಸಿನಲ್ಲಿ ಧರಿಸಿರುವ ಕುಸುಮಗಳು ನಿನ್ನೆರಡು ಪಾದಪದ್ಮಗಳು. ಅವುಗಳನ್ನು ನನ್ನ ಶಿರಸ್ಸಿನಲ್ಲಿ ಧರಿಸಿಕೊಂಡು ನಿತ್ಯ ಸೂರಿಗಳಿಗೆ ಸಮನಾಗಿ ಎಂದು ನಿನ್ನ ನೆಚ್ಚಿನ ಕಿಂಕರನಾಗುವೆನು?

**ಅಪುನರ್ನಿವೃತ್ತಿಯೋಗ್ಯಮವತಾರವಿಹಾರಸಹಚರತ್ವಧನ್ಯಮ್ ।**
**ಆತ್ಮಸಮಭೋಗಮಾತ್ರಮನುಭವಿಷ್ಯಸಿ ದೇವನಾಥ ಕದಾನು ಮಾಮ್ ॥ ೯೦ ॥**

ದೇವನಾಥ, ಮತ್ತೆಂದೂ ಸಂಸಾರಕ್ಕೆ ಹಿಂದಿರುಗದಂತಾಗಿ ನಿನ್ನ ಲೀಲಾಕಾರಗಳ ಕೇಳಿಕೆಯಲ್ಲಿ ಸಹಚರನಾಗುವ ಧನ್ಯತೆಯನ್ನು ಪಡೆದು ನಿನಗೆ ಸಮನಾದ ಆನಂದಾನುಭವವನ್ನು ಹೊಂದುವಂತೆ ಮಾಡಿ ನನ್ನನ್ನೆಂದು ನೀನು ಅನುಭವಿಸುವೆ?

**ಇತಿ ಸ್ಫುಟಮನೋರಥಂ ಮಾಮೇತಾದೃಶವಚನಸಾರಂ ವಶಗಮ್।**
**ಕುರುಷ್ವ ನಿಜಗುಣಗಣೈಃ ಸತ್ಯದಾಸಾನಾಂಸತ್ಯಸದಾ ಸ್ವಚ್ಛನ್ದಃ ॥**
**॥ ೯೧ ॥**

ಎಲೈ ದಾಸಸತ್ಯನೇ, ಇಂತು ಸ್ಪಷ್ಟವಾದ ಅಭಿಲಾಷೆಯುಳ್ಳವನೂ ಇಷ್ಟು ಮಾತನ್ನು ಮಾತ್ರ ಹೇಳುವಸಾಮರ್ಥ್ಯವುಳ್ಳವನೂ ಆದ ನನ್ನ ಇಷ್ಟವನ್ನು ಸ್ವಚ್ಛಂದನಾದ ನೀನು ನಿನ್ನ ಮಂಗಳಗುಣಗಳಿಂದ ಸತ್ಯವನ್ನಾಗಿಸು. ನಾನಂತೂ ನಿನಗೇ ವಶನಾಗಿದ್ದೇನೆ.

**ಬಾಲಪ್ಲವಗ ಇವತರಳೋ ಮಾರುತಿಜಾತಿರಿತಿ ಸಾಗರಂ ತರಿತುಮನಾಃ।**
**ಪ್ರಾರ್ಥಯೇ ತ್ವಾಮಚ್ಯುತ ಕಾಂಕ್ಷಿತಪದಪದ್ಮ ಕ್ಷಮಸ್ವ ಮಮ ಚಾಪೇಯಮ್ ॥ ೯೨ ॥**

ಯಾರ ಪಾದಪದ್ಮಗಳನ್ನು ಪಡೆಯಲು ಎಲ್ಲರೂ ಬಯಸುವರೋ ಅಂಥ ಅಚ್ಯುತನೇ, ಮಾರುತಿಯು ಜಾತಿಗೆ ಸೇರಿದವನೆಂದು ತಿಳಿದು ಸಾಗರವನ್ನು ತಾನೂ ದಾಟಲಿಚ್ಛಿಸುವ ಚಪಲನಾದ ಕಪಿಯ ಮರಿಯಂತೆ ನಾನೂ ನಿನ್ನಲ್ಲಿ ಬೇಡುತ್ತಿದ್ದೇನೆ. ನನ್ನ ಈ ಚಾಪೇಯವನ್ನು ಕ್ಷಮಿಸು.

**ಅಚ್ಯುತ ವಿಷಯಾಕ್ರಾಂತಂ ಭವಾರ್ಣವಾವರ್ತಭ್ರಮಿನಿಮಜ್ಜಂತಮ್।**
**ಜನನೀಸ್ತನಂಧಯಮಿವ ಮಾಮುದ್ಧೃತ್ಯ ಸೇವಸ್ವ ಸ್ವಯಂ ಪಥ್ಯಮ್ ॥ ೯೩ ॥**

ಅಚ್ಯುತನೇ ವಿಷಯ ವಾಸನೆಯಿಂದ ಆಕ್ರಾಂತನಾದವನೂ, ಸಂಸಾರ ಸಾಗರದ ಸುಳಿಗಳ ಸುರುಳಿಯಲ್ಲಿ ಮುಳುಗುತ್ತಿರುವವನೂ ಆದ ನನ್ನನ್ನು ಎಳೆಯ ಮಗುವನ್ನು ತಾಯಿಯು ಹೇಗೋ ಹಾಗೆ ಉದ್ಧರಿಸಿ ನೀನೇ ಸ್ವಯಂ ಸುಖವನ್ನು ಪಡೆಯುವವನಾಗು.

**ಕರ್ಮಮಯಘರ್ಮತಪ್ತಂ ಸುಖಮೃಗತೃಷ್ಣಾಭಿಃಕಾಭಿರಪ್ಯತೃಷ್ಣಾಕಮ್।**
**ಕಾರಯ ನಿರ್ವೃತಂ ಮಾಂ ಕರಕಾಶಿಶಿರೈರಚ್ಯುತ ಕಟಾಕ್ಷೈಃ ॥ ೯೪ ॥**

ಅಚ್ಯುತನೇ, ಕರ್ಮಗಳಿಂದಾದ ಧಗೆಯಿಂದ ತಾಪಗೊಂಡವನೂ, ಸುಖವೆಂಬ ಮರೀಚಿಕೆಗಳಿಂದ ಹಿಂಗದ ಬಾಯಾರಿಕೆಯುಳ್ಳವನೂ ಆದ ನನ್ನನ್ನು ಆಲಿಕಲ್ಲುಗಳಂತೆ ಶೀತಲವಾದ ನಿನ್ನ ಕಡೆಗಣ್ಣೋಟಗಳಿಂದ ಸುಖ ಪಡಿಸು.

**ತವಚಿಂತನವಿಮುಖಾನಾಂ ದೃಷ್ಟಿವಿಷಾಣಾಮಿವ ದರ್ಶನಾನ್ಮೋಚ ಯನ್ ।**
**ಅಮೃತಮುಖಾನಾಮಿವ ಮಾಮಚ್ಯುತ ಭಕ್ತಾನಾಂ ನಯಸ್ವ ನಯ ನಾಸಾರಮ್ ॥ ೯೫ ॥**

ನಿನ್ನ ಚಿಂತನೆಯಿಂದ ದೂರರಾಗಿ ದೃಷ್ಟಿಯಿಂದಲೇ ವಿಷವು ವ್ಯಾಪಿಸುವಂತೆ ಮಾಡಬಲ್ಲವರ ನೋಟಕ್ಕೆ ಸಿಲುಕದಂತೆ ಮಾಡಿಅಮೃತ ಮುಖರೋ ಎಂಬಂತಿರುವ ಭಕ್ತೋತ್ತಮರ ದೃಷ್ಟಿಧಾರೆಗೆ ನನ್ನನ್ನು ಕರೆದೊಯ್ಯುವವನಾಗು.

**ವಿಷಮಿಳಿತಮಧುನಿಭೇಷು ಚ ತೃಣಪ್ರತಿಮೇಷು ಚ ಪ್ರತಿಗ್ರಹೇಷು ಪ್ರಲುಠಿತಮ್ ।**
**ಅಮೃತನಿಧಾವಿವಾಚ್ಯುತ ಸ್ಥಾಪಯ ತ್ವಯಿ ನಿರ್ಮಮಂ ಮಮ ಹೃದಯಮ್ ॥ ೯೬ ॥**

ಅಚ್ಯುತನೇ, ವಿಷಮಿಶ್ರವಾದ ಜೇನಿನಂತೆಯೂ ಹುಲ್ಲಿಗೆ ಸಮನಾಗಿಯೂ ಇರುವ ಪ್ರತಿಗ್ರಹಗಳನ್ನೂ ಕಟ್ಟಿಕೊಂಡು ಒದ್ದಾಡುವ ನನ್ನ ಹೃದಯದ ಮಮಕಾರ ವನ್ನು ದೂರಮಾಡಿ ಅಮೃತ ನಿಧಿಯಂತಿರುವ ನಿನ್ನಲ್ಲಿ ನಿರ್ಮಮವಾಗಿ ನೆಲೆಗೊಳಿಸು.

**ನಿತ್ಯಮಸ್ಮಿನ್ ಕೃಪಣೇ ನಿಕ್ಷಿಪ ಸಮುತ್ಸತ್ಯ ನಿಧಿಸದೃಕ್ಷೌ ।**
**ಪ್ರನಹನ್ನಖಪ್ರಭಾಝರಪ್ರಶಮಿತ ಪ್ರಣಮತ್ಸಂಜ್ವರೌ ತವಚರಣೌ ॥ ೯೭ ॥**

ನಮಿಸುವವರಿಗೆ ಸತ್ಯ ಸ್ವರೂಪನೇ, ಅಮೂಲ್ಯವಾದ ನಿಧಿಗೆ ಸಮಾನವಾಗಿ ಉಗುರುಗಳ ಕಾಂತಿಯ ಪ್ರವಾಹದಿಂದ ನಮಿಸಿದವರ ಸಂತಾಪವನ್ನು ಕಳೆಯುವ ನಿನ್ನ ಪಾದ ದ್ವಯವನ್ನು ಕೃಪಣನಾದ ನನ್ನಲ್ಲಿ ಸದಾ ಇಡುವವನಾಗು.

**ಶರಣಾಗತ ಇತಿ ಜನಿತೇ ಜನವಾದೇಽಪಿ ಯದ್ಯಚ್ಯುತ ನ ರಕ್ಷಸಿ ಮಾಮ್ ।**
**ಭವೇತ್ಖಲು ಸಾಗರಘೋಷಃ ಸಾಗರಪುಳಿನೇ ತಾದೃಶಂ ತವ ವಚನಮ್ ॥ ೯೮ ॥**

'ಇವನು ಶರಣಾಗತನು' ಎಂಬ ನುಡಿ ಜನಜನಿತವಾಗಿ ಹರಡಿದರೂ ನೀನು ನನ್ನನ್ನು ರಕ್ಷಿಸದೆ ಹೋದರೆ, ಎಲೈ ಅಚ್ಯುತನೇ, ಕಡಲಿನ ದಂಡೆಯ ಮರಳಿನ ಮೇಲೆ ನೀನಿತ್ತ ಅಂಥ ಅಭಯ ವಚನ ಅರ್ಥವಿಲ್ಲದ ಸಾಗರ ಘೋಷವೇ ತಾನೇ ಆಗಿ ಬಿಡುವುದು!

**ನಿಕ್ಷಿಪ್ತೋಽಸ್ಮಿ ಚಾಗತಿರ್ನಿಪುಣೈಸ್ತ್ವಯಿ ನಾಥ ಕಾರುಣಿಕೈಃ ।**
**ತಾಂಸ್ತವ ದೃಷ್ಟ್ವಾ ಪ್ರಿಯಾನ್ ಭೃತಂ ನಶಸತ್ಯ ಭರಸ್ವಾತ್ಮನೋ ಭರಮ್ ॥ ೯೯**

ನಾಥನೇ, ನತಸತ್ಯನೇ ಬೇರೆಗತಿಯಿಲ್ಲದ ನನ್ನನ್ನು ಪರಮ ಕಾರುಣಿಕರೂ, ನಿಪುಣರೂ ಆದ ಆಚಾರ್ಯರುಗಳು ನಿನ್ನಲ್ಲಿ ಅರ್ಪಿಸಿದ್ದಾರೆ. ನಿನಗೆ ಪ್ರಿಯರಾದ ಅವರನ್ನು ನೋಡಿ ನಿನಗೊಪ್ಪಿಸಲ್ಪಟ್ಟಿರುವ ನನ್ನದೇ ಆದ ಈ ಭಾರವನ್ನು ವಹಿಸಿಕೋ।

**ನತಸತ್ಯಪಕ್ವಣಾನೀತಗಳಿತಕಿರಾತಭ್ರಮನಿಜಕುಮಾರಮಿವನೃಪಃ ।**
**ಭವಿಷ್ಯ ದ್ಯೌವನ ವಧೂಂ ವರ ಇವಮಾಂಲಭಸ್ವಮಂತ್ರಿಜನ**
**ವಿಜ್ಞಾಪಿತಮ್ ॥ ೧೦೦ ॥**

ನತಸತ್ಯನೇ, ತಾನು ಬೇಡನೆಂಬ ಭ್ರಾಂತಿಯನ್ನು ಕಳೆದುಕೊಂಡವನೂ, ಕಿರಾತರ ಪಾಳಿಯದಿಂದ ತರಲ್ಪಟ್ಟವನೂ ಆಗಿ ಮಂತ್ರಿಗಳಿಂದ ಇವನಿಂಥವನೆಂದು ವಿಜ್ಞಾಪಿಸಲ್ಪಟ್ಟವನೂ ಆದ ರಾಜಕುಮಾರನನ್ನು ರಾಜನು ಸ್ವೀಕರಿಸುವಂತೆ ಮತ್ತು ಮುಂದೆ ಯೌವನವನ್ನು ಪಡೆಯುವ ಮದುಮಗಳನ್ನು ವರನು ಸ್ವೀಕರಿಸುವಂತೆ ನೀನೂ ಸಹ ಪ್ರಿಯ ಜನರಿಂದ ನಿವೇದಿಸಲ್ಪಟ್ಟ ನನ್ನನ್ನು ಸ್ವೀಕರಿಸು.

**ಇತಿಕವಿತಾರ್ಕಿಕಕೇಸರಿವೇದಾಂತಾಚಾರ್ಯವೆಂಕಟೇಶವಿರಚಿತಮ್।**
**ಸುಭಗಮಚ್ಯುತಶತಕಂ ಸಹೃದಯ ಹೃದಯೇಷು ಶೋಭತಾಂ**
**ಸಮಗ್ರ ಗುಣಮ್ ॥ ೧೦೧ ॥**

ಕವಿತಾರ್ಕಿಕಕೇಸರಿಗಳೂ, ವೇದಾಂತಾಚಾರ್ಯರೂ ಆದ ವೆಂಕಟೇಶರಿಂದ ವಿರಚಿತವಾದ ಸುಭಗವೂ, ಸಮಗ್ರವಾಗಿಗುಣಯುಕ್ತವೂ ಆದ ಈಅಚ್ಯುತ ಶತಕವು ಸಹೃದಯರ ಹೃದಯದಲ್ಲಿ ಸದಾ ಶೋಭಿಸಲಿ.

**ಕವಿತಾರ್ಕಿಕಸಿಂಹಾಯ ಕಲ್ಯಾಣಗುಣಶಾಲಿನೇ ।**
**ಶ್ರೀಮತೇ ವೆಂಕಟೇಶಾಯ ವೇದಾಂತ ಗುರವೇ ನಮಃ॥**
**ಶ್ರೀಮತೇ ನಿಗಮಾಂತ ಮಹಾದೇಶಿಕಾಯನಮಃ।**

॥ ಶ್ರೀ ॥

# ಶ್ರೀ ವೆಂಕಟನಾಥರ ಅಚ್ಯುತಶತಕಂ

(ಅನುವಾದ)

ನಮಿಸಿರ್ಪೆ ಗರುಡನದಿಯೆಡೆಯ ಹೊಂಗೆಯ ಮರಕೆ
ಔಷಧಾಚಲತಟವಿಹಾರಿ ಸಲಗಂಗೆ
ದಾಸಜನಕೆಂದಿಗೂ ತಪ್ಪದಚ್ಯುತವೆನಿಪ
ನಂದದೀವಿಗೆಯಾದ ದೇವನಾಥಂಗೆ—ನಮಿಸಿರ್ಪೆ ಅಹೀಂದ್ರಪುರಹರಿಗೆ ॥ ೧ ॥

ದಾಸಸತ್ಯನೆ ! ಒಲಿದು ವಾಣಿ ವೀಣಾಪಾಣಿ
ಕೊಂಡಾಡಿ ನಲಿನಲಿವ ನಿನ್ನ ನುತಿಗಳನು
ಅನುಕರಿಸಿ ಪಂಜರದ ಗಿಳಿಯಂತೆ ಜಲ್ಪಿಸುವ
ಬಾಲನೀ ನುಡಿಗೂ ಪ್ರಸನ್ನನಾಗೈ ॥ ೨ ॥

ಗಂಗಾಪ್ರವಾಹದಲಿ ಬಚ್ಚಲಿನ ನೀರದೂ
ಬೆರೆತು ಕೊಳೆಯಂ ನೀಗಿ ಸಲ್ಲುವಂತೆ
ಎನ್ನ ನುಡಿಯೆಂತಾದರೂ ನಿನ್ನ ಬೆಳ್ಜಸದ
ಬೆಳುದಿಂಗಳೊಡಗೂಡಿ ಶುಚಿಯೆನಿಸಲೈ ॥ ೩ ॥

ನಿನ್ನನುತಿಯೊಳು ನುರಿತ ವಂದಿಗಳ ಪೋಲಿರ್ಪ
ಹಿರಿಯಶ್ರುತಿಗಳ ನಡುವೆಯೆನ್ನ ಕಿರುನುತಿಯು
ಶೋಭಿಸಲಿ ಸುರನಾಥ ! ಹಿರಿಯ ಸಭೆಯಲ್ಲಿಯೂ
ರಸವೀವ ವಿಕಟಕವಿ ವಚನದಂತೆ ॥ ೪ ॥

ಎಮ್ಮ ಗುರುಗಳ ನಾಲಗೆಯ ಸಿಂಹಪೀಠದಲಿ
ನೆಲೆಗೊಂಡು ಸತ್ಯವನೆ ಸಾರಿರುವೆ ನೀನು
ಇಂತು ಮೂಢತೆ ಕಳೆಯೆ ನಿನ್ನ ವಿಷಯದೆ ನಾವು
ನುಡಿವ ನುಡಿ ಸತ್ಯದಿಂ ದೂರವಹುದೆ—ಓ ಅಚ್ಯುತನೆ ॥ ೫ ॥

ಜಾಹ್ನವಿಯ ಲಹರಿಯಲಿ ತುಂಬುವೆರೆ ಹೊಳೆವಂತೆ
ನಿರ್ಮಲರ ಹೃದಯದಲಿ ಸ್ಫುಟವಾಗಿ ಮೆರೆವೆ
ಕೊಳೆನೀರನುಳಿದು ಕಡೆಸಾರುವಾ ಹಂಸದೊಲು
ಕ್ಷಣವಾದರೂ ನಿಲ್ಲೆ ಕಲುಷರೆದೆಯೊಳ್—ಓ ದೇವ ॥ ೬ ॥

ಆಗಮಗಳಿಂದಲೇ ಅರಿಯೆ ಬಹನಾದರೂ
ಪ್ರಕಟಿಸಿದೆ ಗೊಲ್ಲವೆಣ್ಣಳಿಗು ಮಹಿಮೆಯನು
ನಂಬಿದರ ಚಿತ್ತಕ್ಕೆ ಸುಲಭನೆನಿಸಿದ ನೀನು
ಡೋಲಾಯಮಾನರನು ದೂರ ಬಿಡುವೆ
ಓ ಪ್ರಭುವೆ ನತಸತ್ಯ! ಚಂಚಲರ ಚಿತ್ತಕ್ಕೆ ದೂರವಿರುವೆ ॥ ೭ ॥

ಹೇಯ ಗುಣವಿಲ್ಲದವ, ಸಚ್ಚಿದಾನಂದನಿವ!
ಮೂರುಬಗೆಯವಧಿಯನು ಮೀರಿದವನು
ಎಂದು ನೂರೆಂಟುಪನಿಷತ್ತುಗಳು ನಲವಿಂದ
ನತಸತ್ಯ! ಪಾಡುವುವು ನಿನ್ನ ನಿತ್ಯ ॥ ೮ ॥

ರಚನೆಗೊಳಗಾಗದಿಹೆ ಯೆಲ್ಲವನು ರಚಿಸುವೈ
ನೆಲೆಯಿಲ್ಲ ನಿನಗೆ; ಸಕಲವನು ನೆಲೆಗೊಳಿಪೆ
ಎಲ್ಲವನು ಪರಿಹರಿಪೆ! ನಿನಗಿಲ್ಲ ಪರಿಹಾರ!
ಅನಘತೇಜೋಮೂರ್ತಿಯಿಂತು ಮೆರೆವೆ—ಓ ಅಹೀಂದ್ರನಗರೇಶ್ವರನೆ ॥ ೯ ॥

ಅಣುವಿನಳತೆಯ ಸೂಕ್ಷ್ಮರೂಪದಲ್ಲಿಯು ದೇವ
ಸಕಲವನು ಧರಿಸುವುದು ನಿನ್ನ ಶಕ್ತಿ
ಅದರಿಂದೆ ಕೊರೆಯಿಲ್ಲದೆಲ್ಲವಸ್ತುವ ನೀನೆ
ತಡೆಯಿರದೆ ತುಂಬಿಯುಂ ಪೂರ್ಣನೆನಿಪೆ ॥ ೧೦ ॥

ಧರಿಯಿಸುವೆ, ನಿಯಮಿಸುವೆ, ಆಳುತಿಹೆ, ಮೇಳವಿಸಿ
ಯೆಲ್ಲರೂಪವ ಧರಿಸಿ ನೀನೆ ನೆಲೆಗೊಂಡು
ಕಾರಣವು ನೀನಾಗಿ ಕಾರ್ಯವೂ ನೀನಾಗಿ
ತೋರುವಂತಹನೆಂದು ಕಿವಿಗಳರಿವು—ಓ ಅಚ್ಯುತನೆ!
ಕಾರ್ಯಕಾರಣ ನೀನು ನಮ್ಮ ತಿಳಿವು ॥ ೧೧ ॥

ಚಿದಚಿಚ್ಛರೀರನಾಗುತೆ ನೀನೆ ಅಚ್ಯುತನೆ
ಜಗಗಳಿಗುಪಾದಾನ ಕಾರಣವೆನಿಪ್ಪೈ
ಸಲೆ ನಿಮಿತ್ತತ್ವಮುಂ ಸಂಕಲ್ಪಮಾತ್ರದಲೆ
ವಹಿಸುವೈ ಅದ್ಭುತದ ಶಕ್ತಿಯಿಂದೆ ॥ ೧೨ ॥

ಬೇರೆಬೇರೆಯ ಗುಣದ ಬೀಜಗಳ ಮೊಳೆಬೆಳೆಗೆ
ಸಾಮಾನ್ಯ ಕಾರಣವು ನೀರದೆಂತೋ
ಅಂತೆ ನಿನ್ನಯ ಲೀಲೆ ಕರ್ಮಶಕ್ತಿಯ ಬಲದೆ
ಬ್ರಹ್ಮನಿಂ ಸ್ಥಾವರದವರೆಗಿನೇಳಿಗೆಗೆ ॥ ೧೩ ॥

ಗಂಡೆಲ್ಲ ನಿನ್ನಯ ವಿಭೂತಿ, ಓ ಅಚ್ಯುತನೆ !
ಹೆಣ್ಣೆಂಬುದೆಲ್ಲ ಸಿರಿದೇವಿಯಾ ಹರಹು
ನಿಮ್ಮಿಬ್ಬರಿಂದೆ ಹೊರಗಾದುದೇನುಂಟೆನ್ನು ?
ಸಿರಿಯೆ ನಿನ್ನವಳವಳು ಮಿಕ್ಕುದೇನು ? ॥ ೧೪ ॥

ದೇವಾಧಿದೇವನೇ ! ನಿನಗೆ ಸದೃಶರೆ ಇಲ್ಲ
ಮೇಲಾದರಿನ್ನುಂಟೆ ? **ನೀನೆ ಜಗಕೆಲ್ಲ**
**ರಕ್ಷಕನೆನಿಪ್ಪುದೇ ಎಲ್ಲ ತಿಳಿವಿನ ತಿರುಳು**
ಬೇರೆಲ್ಲ ಚಿಂತೆಯೂ ಇದನರಿಯಲು—ಓ ಪ್ರಭುವೆ !
ಬೇರೆಲ್ಲ ಚಿಂತೆಯೂ ಇದನರಿಯಲು ॥ ೧೫ ॥

ಫಣಿಪತಿಪುರಾಧಿಪನೆ, ನಿನ್ನಾಜ್ಞೆಯನುಸರಿಸಿ
ನಡೆವವರಿಗತ್ಯಧಿಕ ಫಲವು ಸಿದ್ಧ
ಕಮಲಸಂಭವ ಮುಖ್ಯರೂ ಮೀರಲಾಗದುದು
ನಿನ್ನ ಕಟ್ಟಾಣತಿಯ ವಿಭವವಿಂತು ॥ ೧೬ ॥

ಎಲ್ಲ ನಿಯಮವ್ರತಗಳಾಚರಣೆಯನುಸರಣೆ
ನಿನ್ನನುದ್ದೇಶಿಸಿಯೆ ದಾಸಸತ್ಯ
ಬ್ರಾಹ್ಮಣ ನಿಮಂತ್ರಣದೆ ಪಿತೃತೃಪ್ತಿಯಪ್ಪಂತೆ
ಸುರರ ತಣಿಯಿಸಲಹುದು ನಿನ್ನ ತೃಪ್ತಿ ॥ ೧೭ ॥

ಅಚ್ಯುತನೆ ಪೂಜೆಗೊಳ್ವಮರರೇ ಅಳಿವಂದು
ನಿತ್ಯನಹ ನೀನಿಲ್ಲದಿರಲು ಬಳಿಕ
ಅವರನುದ್ದೇಶಿಸಿಯೆ ನಡೆಯಿಸಿದ ಕರ್ಮಕ್ಕೆ
ಫಲವ ಕಲ್ಪಾಂತರದೆ ಕುಡುವರಾರು ? ॥ ೧೮ ॥

ಕಾಂಚನದಲತೆ ಬಳೆದ ಕಲ್ಪವೃಕ್ಷದವೋಲು
ಶ್ರೀದೇವಿಯಂ ಕೂಡಿ ನೆಳಲನೀಯುತ್ತ
ತ್ರಿಭುವನದ ತಾಪಮಂ ಕಳೆದು ನತಸತ್ಯ, ನೀಂ
ಬಯಸಿದ ಫಲಂಗಳಂ ಕುಡುವೆ ನಿತ್ಯಂ ॥ ೧೯ ॥

ಎಲ್ಲ ಶಾಸ್ತ್ರಂಗಳೂ ಕೊಂಡಾಡುವವ ನೀನು
ಎಲ್ಲ ದೇವತೆಗಳಿಗು ಅಂತರಾತ್ಮಂ
ಎಲ್ಲ ಬಗೆ ಫಲಗಳನು ನೀಡುವಾತನು ನೀನೆ
ಎಲ್ಲ ಜನಕೂ ಸಮನು ನತಸತ್ಯ ನೀಂ ॥ ೨೦ ॥

ಇಂತೆಲ್ಲರಿಗು ನೀನೆ ಸಮನಾಗಿ ಸತ್ಯದಲಿ
ನೆಲೆಗೊಂಡು ನಿತ್ಯವೂ ಪರಿಪೂರ್ಣನೆನಿಸಿ
ಪಾಂಡವ ಪ್ರಮುಖರಲಿ ಪಕ್ಷಪಾತವ ತೋರ್ಪೆ
ಆಳಾಗಿಯೂ ನಡೆವೆ! ಹೇಗೊ ನಾನರಿಯೆ! ॥ ೨೧ ॥

ವಿಷಮವಹ ಕರ್ಮಮಾರ್ಗದೆ ನಡೆದು ಜಾರುತ್ತ
ಕರಣಂಗಳೆಲ್ಲವೂ ಕುಸಿದು ನಸಿದು
ಕಳವಳಿಸುವೆಲ್ಲರಿಗೆ ನೀನಲ್ಲದಿನ್ನಿಲ್ಲ
ದಾಸಜನತಾಸತ್ಯ! ಬೇರೆಯೂರೆ ॥ ೨೨ ॥

ನಿನ್ನ ತಿಳಿವಿಗೆ ಸಲದ ವಿಷಯವೇನೆಲೆದೇವ?
ನಿನ್ನ ಕರುಣೆಗೆ ದೂರವೆಂದೆನಿಪರಾರು?
ಆವ ಹೊರೆ-ನಿನ್ನ ಶಕ್ತಿಗೆ ಮೀರಿದುದು ಪ್ರಭುವೆ?
ನೀನೆ ಸಿದ್ಧೋಪಾಯವೆಮಗೆ ಬದ್ಧ ॥ ೨೩ ॥

ಆಳವರಿಯಲುಬಾರದುರುಭವಾಂಬುಧಿಯಲ್ಲಿ
ಜಾರಿ ಬಿದ್ದಾತ್ಮರನು ದಡವ ಮುಟ್ಟಿಸಲು
ಕರುಣೆಗಾಳಿಯ ಬಲದೆ ಸಂಕಲ್ಪನಾವಿಕಂ
ನಡೆಯಿಸುವ ಶುಭನಾವೆ ನೀನೆ ಅಚ್ಯುತನೆ ॥ ೨೪ ॥

ಪರದೈವವೆಂದೆನುತೆ ಬೇರೆ ದೇವರ್ಕಳನು
ಪೂಜಿಸಲು ಮೋಕ್ಷವನು ಸಲಿಸಬಹುದೆ
ಚಿತ್ರಿಸಿದ ದಿನಕರರು ಲಕ್ಷಗಟ್ಟಲೆ ಸಲಲು (ಕೂಡೆ)
ಯಿರುಳ ಹಗಲಾಗಿಸಲು ಶಕ್ಯವಹುದೇ? ॥ ೨೫ ॥

ಅಮೃತ ರಸಸಾಗರದ ನಿರ್ಮಲಾಮೂಲ್ಯ ಘನ
ರತ್ನಂಗಳಂತೆ ಬೇರೆಡೆ ದೊರೆಯದಾ
ನಿನ್ನಗುಣ ರತ್ನಂಗಳಿನಿತೆಂದು ಲೆಕ್ಕಿಸಲು
ಶಕ್ಯವಾಗವಹೀಂದ್ರ ಪುರನಾಥ ದಿಟದಿಂ ॥ ೨೬ ॥

ಶ್ರುತಿಯ ಸೀಮಂತವಂ ಸಿಂಗರಿಪ ನಿಜತನುವ
ಶ್ಯಾಮಶುಭಕಾಂತಿಯಿಂ ಹಸರಿಸುತ್ತ
ಪೇರಾಸೆಮೋಹಗಳ ಕೊಳೆಯು ತೊಲಗಿಸಿ ಮೆರೆವೆ
ಭುಜಗೇಂದ್ರಪುರನಾಥ! ಮುನಿಗಳೆದೆಯೊಳ್ ॥ ೨೭ ॥

ಶ್ರೀವತ್ಸಲಕ್ಷಣದೆ ಶೋಭಿಸುವೆ ಗಳಿಗೆಯೂ
ಅಗಲದಂತಿರೆ ಕೂಡಿ ಶ್ರೀವತ್ಸಲಂ
ಗರುಡನನು ಜತೆಗೊಂಡು ದಾನವರ ಸದೆದ ನೀಂ
ಗರುಡನದಿಯೆಡೆಯಲ್ಲಿ ವಿಹರಿಸುತಿಹೆ ॥ ೨೮ ॥

ಕೌಮಾರಮಂ ನಸುವೆ ಮೀರಿದುರು ಯುವ್ವನಂ
ನೈಜಂ ! ಅನುರೂಪಂ ! ಅಭಿಮತಂ ! ಇದೆನಿಸೆ
ಸೂರಿಗಳ ಮನ್ನಣೆಗೆ ಸಿಲುಕಿ ಸುಖಮಯಮಾದ
ನಿತ್ಯಸ್ವರೂಪದಿಂ ಮೆರೆವೆ ವಿಭುವೆ ॥ ೨೯ ॥

ಅಚ್ಯುತನೆ ! ಶಾಸ್ತ್ರಂಗಳೆಲ್ಲ ಲೆಕ್ಕಿಸಿ ಪೇಳ್ದ
ಪ್ರಕೃತಿಯುಂ ಪುರುಷನುಂ ಪ್ರಕೃತಿವಿಕೃತಿ
ನಿನ್ನಪರರೂಪದಲಿ ಭೂಷಣಾಸ್ತ್ರಗಳಂತೆ
ಹೊಂದಿ ತೋರುವುವೈಯ ಸಕಲ ವಸ್ತು ॥ ೩೦ ॥

ದುರ್ಜನರ ನಿಷ್ಠುರ ಪರಾಕ್ರಮುವನಡಗಿಸುತ
ಸಾಧುಜನರಂ ಕಾಯಲುಜ್ಜುಗಿಸುತ
ಪರಮಧರ್ಮವ ಜಗದೆ ಸಂಸ್ಥಾಪಿಸಲ್ಕೆ ನೀಂ
ಪೊರಮಡಿಪೆಯವತಾರತತಿಯ ವಿಭುವೇ ॥ ೩೧ ॥

ನೀಲರತ್ನದವೋಲು ಹೊಳೆವ ತನುಕಾಂತಿಯಿಂ
ಭುಜಗೇಂದ್ರ ಪುರವರದ ಸುತ್ತನೆಲ್ಲವನು
ನೀಲೈಸಿ ಕೃಷ್ಣಘನ ಕಾರುಣ್ಯವರ್ಷಮುಂ
ಕಾಲದಲಿ ಕರೆವೆ ನೀಂ ದಾಸಜನಕೆ ॥ ೩೨ ॥

ದನುಜವೃಕ್ಷಂಗಳನು ಲೀಲೆಯಿಂ ಮುರಿದ ನೀಂ
ದಾನಧಾರೆಯ ಮೆರೆದು ಗರುಡನದಿಯೆಡೆಯ
ಬನದಲ್ಲಿ ಸಿರಿಧರೆಗಳೆಂಬ ಪಿಡಿಗಳ ಮನವ
ವಶಗೊಂಡು ತೋರುತಿಹೆ ದಿಗ್ಗಜದೊಲು ॥ ೩೩ ॥

ನಿನ್ನ ಮುಖಚಂದ್ರಂಗೆ ಮುಕುಟದಿವಸಕರಂಗೆ
ನಡುವೆ ಅಚ್ಚಳಿಯದೆಯೆ ಸೊಗಸಿನಿಂದ
ಮೆರೆಯುತಿಹ ಕುರುಳ ಕತ್ತಲೆಯ ಸಾಕ್ಷಿಯೊಳಾಯ್ತು
ಸ್ಥಾಪಿತವು ನಿನ್ನಘಟಘಟನಶಕ್ತಿ—ಓ ವಿಭುವೆ ! ॥ ೩೪ ॥

ತಾವರೆಗಳೋರಗೆಯ ತಿಳಿಯಕಣ್ಣುಗಳೆಸೆವ
ಪೂರ್ಣಚಂದ್ರನ ನಗುವ ನಿನ್ನ ಮುಖವು
ನೆನೆದೊಡನೆ ನತಸತ್ಯ ಸುಖವಿತ್ತು ಮಾನಸಿಕ
ದುರಿತಗಳನೂ ದೇವ, ಪೋಗೊಳಿಪುದೈ ‖ ೩೫ ‖

ನಿತ್ಯತಾಪಕೆ ಸಿಲುಕಿ ನೊಂದ ವಿಧಿಮುಖಸುರರು
ತಂಪಿಂಗೆ ನೆಲೆಯಾಗಿ ಶಾಂತಿಯೊದವಿಸುವಾ
ನಿನ್ನ ನೀಳ್ದೋಳುಗಳ ಕಲ್ಪವೃಕ್ಷಂಗಳಾ
ನೆಳಲನನುಭವಿಸುತ್ತ ಸುಖದಿನಿಹರೈ ‖ ೩೬ ‖

ಪ್ರಕೃತಿಜಲರಾಶಿಯಂ ನಿನ್ನ ಸಂಕಲ್ಪಶಶಿ
ಕ್ಷೋಭಿಸಲು ಮೇಲೆದ್ದ ಗುಳ್ಳೆಗಳಿವೆನಿಪಾ
ಬ್ರಹ್ಮಾಂಡಕೋಟಿಯಿಂ ತುಂಬಿಯೂ ನಿನ್ನುದರಂ
ಎಂತೊ ಕಿಂಕರಸತ್ಯ ಕೃಶವೆ ಇಹುದು? ‖ ೩೭ ‖

ವತ್ಸಪೀಠದಮೇಲೆ ವಕ್ಷದಲಿ ನೆಲೆಗೊಂಡ
ಲಕ್ಷ್ಮಿ ಕಾಲಿಡಲಿರುವ ಪೀಠದಂತೆ
ನಿನ್ನ ನಾಭಿಯ ಕಮಲವದು ಶೋಭಿಸುತ್ತಿಹುದು
ನಡುವೆ ನೆಲಸಿದ ದುಂಬಿ ಬ್ರಹ್ಮನೆನಲು—ಓ ದೇವ! ‖ ೩೮ ‖

ಮಧುಕೈಟಭಾಸುರರ ಹಿಂಡುವಾಗಿನ ಹರಿದ
ನೆತ್ತರಿಂ ಕೆಂಪೇರಿತೆಂಬ ತೆರದಾ
ನಿನ್ನ ಪೀತಾಂಬರದೊಳಳವಟ್ಟು ದನಿ ಗುಡುವುದು
ಉಡಿಗೆಜ್ಜೆ ಮದನಗಜಶೃಂಖಲೆವೊಲು—ಅಚ್ಯುತನೆ ‖ ೩೯ ‖

ದನುಜವೀರರ ದೀರ್ಘಶಯನಕ್ಕೆ ಸೆಜ್ಜೆಯೆನೆ
ಹೆಸರಾಂತ ನಿನ್ನೆರಡುತೊಡೆಗಳಚ್ಯುತನೆ!
ನಿನ್ನುದರದಲ್ಲಿರುವ ಮೂಲೋಕದೋವರಿಯ
ಕಂಬಂಗಳೆರಡೆನಲು ಶೋಭಿಸುತಿವೆ ‖ ೪೦ ‖

ರನ್ನಗನ್ನಡಿಯಂತೆ ಜಾನು ಕಣ್ಗೊಳಿಸುತಿರೆ
ಪಚ್ಚೆಮಣಿ ಪಡಿಗವೆನೆ ಜಂಘೆ ಮೆರೆಯುತಿರೆ
ಕಮಲಲಾಂಛನದಿಂದೆ ಕಳೆ ಮಿಕ್ಕ ನಿನ್ನಡಿಯ
ನುಳಿಯದಿಹುದೈ ಕಾಂತಿ ಲಕ್ಷ್ಮಿಯಂತೆ—ದೇವ ‖ ೪೧ ‖

ವಿಕ್ರಮಿಸಿ ಲೋಕಗಳನಳೆವಂದು ಜನಿಯಿಸಿದ
ಗಂಗೆಯಿಂ ಮೂಜಗದ ಪಾಪವನು ನೀಗಿ
ಶೋಭಿಪುದು ಶ್ರುತಿಸತೀಸೀಮಂತಕುಸುಮವೆನೆ
ಸತಸತ್ಯ ನಿನ್ನ ಚರಣಾರವಿಂದಂ—
ಸರ್ವಶರಣಮೆನಿಪ್ಪ ಬಿರುದಿನಿಂದಂ || ೪೨ ||

ದಾಸಜನರೆಲ್ಲ ಬೇಗೆಗೆ ಮದ್ದು ! ಮೂಲೋಕ
ದೇಕಮೂಲಂ ಸುಧೆಯ ರಸಕಮಿಂಪೆಂದು
ವಿಮಲೌಷಧಾಚಲದ ಮಗ್ಗುಲಲಿ ಮೂಡಿರ್ದ
ನಿನ್ನನೇ ಸೇವಿಸುವರನಘರೊಲಿದು—ಓ ಪ್ರಭುವೆ || ೪೩ ||

ಸಿದ್ಧಾಂಜನದವೋಲು ಶ್ಯಾಮವಹ ನಿನ್ನೊಡಲ
ತಮ್ಮ ನಯನಂಗಳಲಿ ಜೋಡಿಸುತ್ತ
ಗೂಢನಿಧಿಯಂತೆಸೆವೆ ಲಕ್ಷ್ಮೀನಿವಾಸನಂ
ನಿನ್ನನಚ್ಯುತ ಕೆಲರು ಕಾಣ್ಬರಯ್ಯ || ೪೪ ||

ದಟ್ಟಗತ್ತಲೆ ತೊಲಗೆ, ಜ್ಯೋತಿ ಸುತ್ತಲು ಬೆಳಗೆ,
ಮೂರು ಲೋಕಕ್ಕೊಬ್ಬ ಸೂರ್ಯನಹ ನೀನು
ದೃಷ್ಟಿಗೋಚರನೆನಿಸೆ ಕಂಡವರಿಗಿನ್ನುಂಟೆ
ಜಗದೀಶ ಮೋಹದಾ ಮಬ್ಬು ಬಳಿಕ ? || ೪೫ ||

ಇಂದ್ರಿಯಂಗಳ ವಿಷಯದಲಿ ನಿದ್ರಿಸುವರಾಗಿ
ಯಾವ ವಿಕೃತಿಗು ಮನದೊಳೆಡೆಯ ಕೊಡದಂತೆ
ದೇವ ! ಜೀವನ್ಮುಕ್ತರಂತೆ ತೋರುತಲಿಹರು
ಪಾವನರು ನಿನ್ನವರು ಭಕ್ತಜನರು || ೪೬ ||

ಗಂಧರ್ವನಗರದಂತಿರೆ ಮತ್ತೆ ಕನಸಿನೊಲು
ತೋರಿ ಹಾರುವ ಬೇರೆಯೆಲ್ಲ ಬಗೆಯಾದ
ಕಾಡುತೊರೆಗಳ ಸಿರಿಯ ನೆನಹು ಬರುವುದುಮುಂಟೆ
ನಿನ್ನಹಿಡಿತದ ಮತ್ತ ಜೀವಗಜಕೆ—ದೇವ || ೪೭ ||

ತೆರೆಯಂತೆ ತೊರೆಯಂತೆ ನೀರ್ಗುಳ್ಳೆಯಂತೆಯೂ
ಕೊಡನಾರಿ ಕಂದಳಿಯಗೆಡ್ಡೆ ಬಾಳೆವೊಲು
ಅಚಿರವೆನ್ನುತೆ ಬ್ರಹ್ಮಮುಖ್ಯರಾ ಪದವಿಯನು
ಕಡೆಗಣಿಸಿ ನಡೆವರೈ ತಿಳಿದ ಜನರು || ೪೮ ||

ಸ್ವಪರಸ್ವಭಾವವನು ಕಂಡರಿತ ಸಜ್ಜನರು
ನಿನ್ನ ಘನಶೀಲವನು ನೆನೆದು ಕೈಕೊಂಡು
ತಮ್ಮಲ್ಲಿ ತಾಂ ನಾಚಿ ನಡೆಯುವರು ನತಸತ್ಯ !
ಸರ್ವಜನ ಸೌಹಾರ್ದದಿರವ ಬಿಡದೆ ॥ ೪೯ ॥

ಮಾನಮುದದಂಭಮತ್ಸರಭಯಾ ಸೂಯೆಗಳು
ಕರುಬು ಹೋರಟೆ ಲೋಭವೆಂಬ ಹೆಸರುಳ್ಳ
ಮೋಹಸಂತಾನಗಳು ದೋಷಗಳು ಕಾಣಿಸವು
ದಾಸಸತ್ಯನೆ ! ನಿನ್ನ ಭಕ್ತಜನದಿ ॥ ೫೦ ॥

ನಿನ್ನನುಳಿದನ್ಯದಲಿ ಹರಿವ ಚಿತ್ತದ ಜನಕೆ
ಯೆಲ್ಲಕಾಲವು ನೋಡೆ ಕಲಿಯೊಂದು ಹರಹು
ಭುಜಗೇಂದ್ರನಗರೇಶ ! ನಿನ್ನಪದದಲಿ ನಟ್ಟ
ಮನದವರಿಗಿಲ್ಲವೈ ಕಲಿಯ ಕುರುಹು ॥ ೫೧ ॥

ಮೋಕ್ಷಕಾಂಕ್ಷೆಯಜನರ ಮಾರ್ಗವೆನೆ ಹೆಸರಾದ
ದಿನಕರನ ಮಂಡಲದೆ ಛಿದ್ರವನು ಕಾಣ್ಬ
ಮೂಢರಂತಿರೆ ಕೇಡುಗಾಲವು ಸಮಿಾಪಿಸಿದ
ಜನರು ತಪ್ಪೆಣಿಸುವರು ನಿನ್ನವರಲಿ ॥ ೫೨ ॥

ದೂರ ದೂಡಿದರಾಗಿ ಹಮ್ಮು ಬಿಮ್ಮುಗಳೆಂಬ
ಮೋಡಗಳನಮಲಗುಣ ತಾರಕಾಗಣವ
ಕೆಳೆಗೊಂಡು ಭಕ್ತಿಯಾ ಬೆಳುದಿಂಗಳಿಂ ಕೂಡಿ
ಹೊಳೆಯುವರು ನಿನ್ನವರು ಗಗನದಂತೆ ॥ ೫೩ ॥

ನಿನ್ನಡಿಯ ತಾವರೆಯ ಶರಣುಹೊಂದಿದ ಜನಕೆ
ಜವನ ಹಿಡಿತಕೆ ಸಲುವ ಭೀತಿಯಿಲ್ಲ ವಿಭೂ !
ಜಾರಿದರಿಗೂ ಸಲ್ವುದರಮನೆಯ ಕಿಂಕರರ
ಲೋಪಕ್ಕೆ ಸಲುವಂತೆ ಲಘುವೆ ಶಿಕ್ಷೆ ॥ ೫೪ ॥

ಕರ್ಮಗತಿದೋಷದಿಂ ದುಃಖಕ್ಕೆ ಸಿಲುಕಿದರು
ಯಮನ ಹುಬ್ಬಿನ ಹಾವ ನೋಡಿ ಬೆದರುವರು
ಮನವ ಮಥಿಸುವ ಸುಖದ ರಸದ ಹಾನಿಯ ಕಂಡು
ನಿನ್ನಡಿಗಳನೆ ಕಡೆಗೆ ಪೂಜಿಸುವರೈ—ದೇವ ॥ ೫೫ ॥

ವಿಧಿಯಿಂದಲಾಚರಿಸುವೆಲ್ಲ ಪೂಜೆಯುು ದೇವ
ನಿನ್ನ ಚರಣವನೆಯ್ದಿ ಧನ್ಯವೆನಿಸುವುದು
ಸ್ವೀಕರಿಪ ಬಗೆ ಬೇರೆ ! ಶೇಷವಸ್ತ್ರವು ತಲೆಗೆ
ಏಕಾಂತ ಭಕ್ತರರ್ಪಣೆಯುು ನಿನಗೆ ! ॥ ೫೬ ॥

ನಿನ್ನ ಮುಖಚಂದ್ರಮನ ಕಾಂತಿಕೌಮುದಿಯಿಂದೆ
ಮನವೆಂಬ ಶಶಿಕಾಂತವೊಸರಿ ಹರಿದಂತೆ
ಸುಖಬಾಷ್ಪದಿಂ ಕೂಡಿ ಮುಳ್ವಿಡಿದ ಮರದವೊಲು
ಮೈನವಿರಿನಿಂ ನಲಿವ ಭಕ್ತರಂ ಬಿಡೆಯಯ್ ॥ ೫೭ ॥

ಆರೊಳಗು ಹಗೆಯಿಲ್ಲದಚಲಧರ್ಮವ ಹಿಡಿದು
ನಿರ್ಮುಕ್ತಸಂಗರೆನೆ ಹಿರಿದೊಲ್ದು ನಡೆದು
ಇತರರಿಗೆ ದುರ್ಲಭನೆನಿಪ್ಪ ನಿನ್ನನೆ ದೇವ
ಹೊಂದುವರು ನಿನ್ನವರು ಭಕ್ತ ಜನರು ॥ ೫೮ ॥

ಅಹಿಪತಿ ಪುರೇಶ್ವರನೆ ! ನೆರೆಯೊಳಗೆ ನೀನಿದ್ದು
ಗಗನದಂತಿರೆ ಮುಟ್ಟೆ ಶಕ್ತರಾಗದೊಲು
ವಿಷಯಂಗಳಲಿ ತೊಡಕಿದುಯ್ಯಾಲೆಮನದವರು
ನಿನ್ನಪಡೆಯರು ಬಯಸಿ ಸಡಗರಿಸಿಯೂ ॥ ೫೯ ॥

ನಿನ್ನ ಸೇವಾಹರ್ಷ ರಸಭರಿತರಾದವರು
ಮೋಕ್ಷಕಾಂಕ್ಷೆಯುು ತಮಗೆ ಹಿರಿದಾಗಿ ಸಲೆಯೂ
ಸಕಲರಕ್ಷಣಕುತೂಹಲದ ನಿನ್ನಿಚ್ಛೆ ಸಲೆ
ಉಳಿವರ್ರೈ ಚಿರವಿಲ್ಲಿ ತನುವ ಧರಿಸಿ ॥ ೬೦ ॥

ಸ್ಥಿರಸುಗುಣರಾಶಿಯೇ ಗಿರಿಶಿಲೆಗಳೆಂದೆನಲು
ನಡೆವ ಸೇತುಗಳಂತೆ ಕೂಡಿ ಕಣ್ಗೊಳಿಪಾ
ನಿಜಭಕ್ತರಂ ಜನರಿಗೊದವಿಸುತೆ ಹೇ ಪ್ರಭುವೆ
ದಾಟಿಸುವೆ ಸುಲಭದಿಂ ಜನ್ಮಜಲಧಿಯನು ॥ ೬೧ ॥

ತಮಗಿಲ್ಲದಿರೆ ಪುನರ್ಜನ್ಮಭೀತಿಯು ತೊಡಕು
ಬಂದುದೆಲ್ಲವು ಹಿತಕೆಯೆಂಬ ದೃಷ್ಟಿಸಲೆ
ಸ್ವಾಗತಿಸುತುಂ ಪ್ರಿಯಾತಿಥಿಯಂತೆ ಕಡೆಯದಿನ
ವೈತರಲು ಸುಖಿಸುವರು ನಿನ್ನಜನರು ॥ ೬೨ ॥

ಹಬ್ಬಿರುವ ಮಬ್ಬಿನೀ ಜಗದೆ ಸತ್ಪಾತ್ರದಲಿ
ನೆಲೆಗೊಳಿಸಿ ಹಿಡಿದ ಸುಜ್ಞಾನದೀಪವನು
ಕೃತಕೃತ್ಯರೆನಿಸಿರ್ಪ ನತರಂ ಸ್ವಯಂಪ್ರಭೆಯ
ನಿಜಧಾಮಕೊಯ್ಯುವೈ ನೀನೆ ಒಲಿದು—
ಓ ವಿಭುವೆ ! ನಿಜಧಾಮಕೊಯ್ಯುವೈ ನೀನೆ ಒಲಿದು ॥ ೬೩ ॥

ಒಲವು ತುಂಬಿದ ಕಣ್ಗಳರಳರಳಿ ಹಿಗ್ಗುತಿರೆ
ನಿನ್ನ ಚೆಲುವನು ಹೀರಿ ಹಸಿವ ಹಿಂಗಿಸುತ
ಸಾಯುಜ್ಯವಂ ಪಡೆದು ಫಣಿಪತಿಯೆ ಮೊದಲಾದ
ಸೂರಿಗಳ ಸಾಲ್ದುಂಬಿ ನಲಿವರವರು ॥ ೬೪ ॥

ಯಮನಿಯಮಮಾಸನಕ್ರಮವು ಪ್ರಾಣಾಯಾಮ
ಪ್ರತ್ಯಾಹೃತಿ ಧ್ಯಾನ ಧಾರಣ ಸಮಾಧಿ
ಎಂಬುವೀ ಮೆಟ್ಟಲ್ಗಳೊಂದೊಂದರೇರಿಕೆಯ
ಕ್ರಮದಿಂ ವಿಲಂಬಕ್ಕೆ ಕಾರಣವದಾದ
ಯೋಗ ಮಾರ್ಗಾವಲಂಬನಕೆ ಜೆದರುತೆ ದೇವ
ನಿನಗೆ ಹೊರೆಯೊಪ್ಪಿಸುವ ಶುಭಪಥವ ಹಿಡಿದು
ಶರಣೆಂದು ನಿನಗೆ ನಮಿಸುತ್ತೆ ಮುಚುಕುಂದನುಂ
ಕ್ಷತ್ರಬಂಧುಮುಖರೂ ಗತಿವಡೆದರೈ ॥ ೬೫ ॥

ಪಶುವಿಂಗೆ ಸಮನೆಂದು ದೇವತೆಗಳೆಣಿಸಿದ್ದ
ಜಂತುವೂ ದೇವೇಶ ನಿನ್ನಪದವೊಂದಿ
ಸಂಸಾರಚಕ್ರದಲಿ ತೊಳಲುವವರಿಂದಲೇ
ಪೂಜೆಯಂ ಪಡೆಯುವನು ತಾನೆ ನಿತ್ಯ ॥ ೬೬ ॥

ಕಣ್ಗೆಡಿಪ ಮೋಹಮಬ್ಬಿನ ಕಡಲ ಬವಳಿಯಾ
ಮಾಯಾಮಹಾರಾತ್ರಿ ಕೊನೆಗೊಳ್ಳುವುಷೆಯು
ಪರಮಪದವಿಯ ನೆಲೆಗೆ ಪೊರಮಡುವ ಮೊದಲಿನಣಿ
ಅಚ್ಯುತನೆ ! ನಿನ್ನೊಲಿದ ನೋಟವರಿಯೆ ॥ ೬೭ ॥

ಮುಕ್ತಿಸುಖವೃಕ್ಷಕ್ಕೆ ಮೂಲವದು, ಮೋಹದಾ
ಮುಪ್ಪುಬೇನೆಗಳಳಿಯೆ ವರರಸಾಯನವು,
ಎಲ್ಲ ನಲ್ಮೆಗಳೊಂದು ನೆಲೆವೀಡು, ನತಸತ್ವ,
ನಿನ್ನ ಕೀರ್ತನಮಮೃತ ಸದೃಶವೈ ಪ್ರಭುವೇ ॥ ೬೮ ॥

ಮೊದಲು ಮಾಡಲು ಹಿರಿಯ ತೊಡಕಾವುದೂ ಇಲ್ಲ
ನಡುವೆ ನಿಂತರು ಮತ್ತೆ ದೋಷಕೆಡೆಯಿಲ್ಲ!
ಸ್ವಲ್ಪವಾದರು ದೇವದೇವ, ನಿನ್ನಯ ಪೂಜೆ
ಹಿರಿಯ ಭಯವನು ಕಳೆದು ಕಾಪಿಡುವುದೈ ॥ ೬೯ ॥

ನೀನಪ್ರಸನ್ನನಾಗಿರಲು ಮುಳಿವರು ಪರರು
ನಿನ್ನಯ ಹಸಾದದಲಿ ಸಕಲರ ಹಸಾದ
ನೆವವ ಮುಂದಿಟ್ಟೊಲಿವ ಮುಳಿಯುವಂಥವರಿಂದೆ
ನಮಗಾಗಬೇಹುದೇಂ ಪೂಜೆಯಿಂ ತಂದೆ? ॥ ೭೦ ॥

ಅಚ್ಯುತಪ್ರಭುವೆ ಬೇರೆಲ್ಲದೇವತೆಗಳೂ
ಒಲಿದೆನಗೆ ಮಾಡುವಾ ಹಿತವದೇನೈಯ?
ಹಿರಿಯ ಮಂಜಿನ ರಾಶಿ ನೂರಾರು ಕೂಡಿಯೂ
ಚಾತಕದ ಬಾಯಾರು ಹರಿದು ತಣಿವಹುದೇ? ॥ ೭೧ ॥

ಬಿಸಿಲುದೊರೆಯನು ನಂಬಿ ನಡೆದು ಬವಣೆಗೆ ಸಿಲುಕಿ
ಬೇಯುತಿರುವೆನ್ನ ಸಂತಾಪವೆಲ್ಲವದು
ಶಮನವೊಂದುವುದೈಯ ಸಂಶ್ರಿತರ ಕಡೆಗೊಲಿದು
ಧಾವಿಸುವ ನಿನ್ನ ಕರುಣಾಪ್ರವಾಹದಲಿ ॥ ೭೨ ॥

ಹುರುಳನರಿಯದೆ ಹಲವು ವಿಷಮಧರ್ಮಂಗಳನು
ಧ್ವಜದಂತೆ ಹಿಡಿಯುತ್ತ ನಡೆದತ್ತಲಿತ್ತ
ಎಂತೊ ಅಡವಿಗೆ ನುಗ್ಗಿ ಹಾದಿಯರಿಯದೆ ತೊಳಲಿ
ಅಡಿಗಡಿಗೆ ಜಾರುತಿಹ ದೀನನಂತಿಹೆನೈ ॥ ೭೩ ॥

ಅಚಲಧರ್ಮದೆ ನಡೆವನಂತೆ ಸೋಗನು ಹಾಕಿ
ಧರ್ಮಹೀನರೊಳಗ್ರಗಣ್ಯನೆನೆ ಸಲುತ
ಪ್ರತಿಕೃತಿಗೆ ದೂರನೆನೆ ನುಸುಳುತಿರುವೀಯೆನ್ನ
ಸಿರಿಯ ಸನ್ನಿಧಿಯಲ್ಲಿ ತೋರಿ ನಗುವೈ ॥ ೭೪ ॥

ಒಂದುದಿನವೀದೇಹದಿಂ ಮಾಡಿದಾ ಪಾಪ
ಕಳೆಯೆ ಸಾಲದು ಕಾಲವೆಲ್ಲವೂ ನಾಥ!
ನಿನ್ನ ಕರುಣೆಗೆ ಪೂರ್ಣಪಾತ್ರನೈ ; ಅದರಿಂದೆ
ಕೈಬಿಡದೆ ಸಲಹೈಯ ಶರಣರೊಡೆಯಾ ॥ ೭೫ ॥

ಎಣಿಕೆಗೊದಗವು ದೇವ, ನಿನ್ನ ಸುಗುಣದ ರಾಶಿ
ಲೆಕ್ಕಿಸಲು ಶಕ್ಯವಿಲ್ಲೆನ್ನ ದೋಷಗಳೂ
ಆದರೇನೈ ಮೊದಲು ನುಡಿದುವೇ ಗೆಲ್ಲುವುವು
ಹಿರಿಯರನು ಸೇರಿದರಿಗುಂಟೆ ಸೋಲು ? ‖ ೭೬ ‖

ಮುರಿಮುರಿದು ಬೀಳುತ್ತಲಿಹುವು ಹಗಲೂ ಇರುಳು
ತನುವಿನಾಯುಸ್ಸೆಂಬ ಮರದ ತುಣುಕುಗಳು
ಕಂಡು ಕಂಡೂ ಕೊಬ್ಬು ಕೊರೆಯಾಗದಳಿಮನದ
ಮರುಳನಂ ಭರಿಸೈಯ ಮರೆಯದೀಗ—ಓ ವಿಭುವೆ ‖ ೭೭ ‖

ಅರಿವೆಯಂಚಿನೊಳುಳಿದ ನೀರ ಬಿಂದುವಿನಂತೆ
ಉಸಿರೊಂದೆ ಕುರುಹಾದ ದೇಹವಿದರಲ್ಲಿ
ಕರಣಗಳು ಕುಗ್ಗಿಯೂ ನಿಡುಜವ್ವನಕ್ಕಾಗಿ
ಬಯಸುತಿರುವೆನ್ನ ನೀಂ ಬಲ್ಲೆ ವಿಭುವೇ ‖ ೭೮ ‖

ಮಾಡಬೇಹುದನರಿಯೆಂ—ಎಳ್ಳನೊನೆಯಷ್ಟರಿತ
ವಿಷಯದಲ್ಲಿಯು ಅಡ್ಡಹಾದಿಯನೆ ಹಿಡಿವೆಂ
ಎನ್ನ ನಡೆಗಾನೆ ನಾಚುತ್ತಿಹೆನೊ ! ನತಸತ್ಯ,
ಕೈಬಿಡಲು ಸಲ್ಲದೈ ಕರುಣೆಯೊಡೆಯಾ ‖ ೭೯ ‖

ನಾನಾರು, ಮಾಡತಕ್ಕುದದೇನು, ಮೇಣಿಲ್ಲಿ
ಬಿಡತಕ್ಕುದೇನೆಂಬುದೆಲ್ಲವನು ಬಲ್ಲಯ್
ಎನಗೆ ಹಿತವಾಚರಿಸೆ ಶಕ್ತನಹೆ ದೇವೇಶ !
ನಿನ್ನ ಮನವೇನುಂಟೊ ಅಂತು ನಡೆಸೈ ‖ ೮೦ ‖

ನಿನ್ನ ಗುಣದಲಿ ಸಿಲುಕಿ ಯಿಾಗಲೂ ಮುಂದೆಯೂ
ಸೂತ್ರಧಾರನ ಕೈಯ ಬೊಂಬೆ ನಾನಯ್ಯ
ಪರವಶತೆಯಿಂತಿರಲು ನಿನ್ನಿಷ್ಟದಂತೆನ್ನ
ಕುಣಿಸಿ ಸುಖಿಸೈ ವಿಭುವೆ ಕರಣಮೂರರೊಳು ‖ ೮೧ ‖

ಪುಣ್ಯಪಾಪಗಳೆಂಬ ಕೋಳವೆರಡಂ ಕಳಚಿ
ಬೇಕು ಬೇಡೆಂಬ ಜನವರ್ಗದಲಿ ಹಂಚಿ
ತನುವೆಂಬ ಘೋರ ಕಾರಾಗೃಹದ ಗವಿಯಿಂದೆ
ಜಡಿಸಿ ಹೊರಗಾಗಿಸುವೆಯೆಂದು ವಿಭುವೇ ?—ನೀಯೆನ್ನ ‖ ೮೨ ‖

ಹೃದಯದಲಿ ನೆಲೆಗೊಂಡ ನಿನ್ನೊಳೊಂದಾಗುತ್ತ
ಬ್ರಹ್ಮನಾಡಿಯ ಹಾದಿಹಿಡಿದು ಹೊರವಡುತ
ದಿನಕರನು ಕೈಗೊಡಲು ಮುಂದೆ ನಡೆವೊಲು ಮಾಡಿ
ಪ್ರಿಯಸುತನನೆಂತಂತು ಕಂಡೆಂದು ಸುಖಿಪ್ಪೆ ?—ಎನ್ನ ನೀಂ ‖ ೮೩ ‖

ಅಗ್ನಿಮೊದಲಿಗನೆನಲು ಅಮಾನವನೆ ಕಡೆಯಾಗಿ
ಆತಿವಾಹಿಕರೆನಿಪ ನಿನ್ನ ಪೂರುಷರು
ದಟ್ಟಗತ್ತಲೆ ತುಂಬಿದೀ ತ್ರಿಗುಣದಡವಿಯಿಂ
ಎಂದು ದಾಟಿಪರೈಯ ಎನ್ನನಚ್ಯುತನೇ ? ‖ ೮೪ ‖

ಎಂದು ದಾಟಿಸುತೆ ವಿರಜಾನದಿಯನೊಲವಿಂದೆ
ಪರಿಶುದ್ಧ ಸತ್ತ್ವಮಯವೂ ಸೌಮ್ಯವೆನಿಪ
ತನುವ ಕರುಣಿಸಿ ಬ್ರಹ್ಮರೂಪದಿಂ ಸಿಂಗರಿಸಿ
ಕಿಂಕರನನಾಗಿಸುವೆ ಯೆನ್ನ ವಿಭುವೇ ‖ ೮೫ ‖

ಸಂಸಾರಸಾಗರದಿನುದ್ಧರಿಸಿ ಹೊಳಪಿತ್ತು
ಕೌಸ್ತುಭದ ರನ್ನಗನ್ನಡಿಯನೆಂತಂತು
ಎಂದು ನಿನ್ನೆದೆಗೆ ಜೋಡಿಸುವೆಯೆನ್ನಂ ದೇವ !
ನೋಡಿ ನಲಿಯಲು ದೇವಿ ಚೆಲುವನೊಲಿದು ? ‖ ೮೬ ‖

ಮನ್ಮಥಾರಿಯ ಮುಡಿಯ ಸಿಂಗರಿಪ ಸುರನದಿಯೆ
ಮಕರಂದದೊಸರೆನಲು ಮಹಿಮೆಯಂ ಮೆರೆದು
ಲೀಲಾವಿಹಾರದಿಂ ಮೂರುಲೋಕವನಳೆದ
ನಿನ್ನಡಿಯ ತಾವರೆಯೊಳೆಂದು ಸಲುವೆ ?—ನಾಂ ಪ್ರಭುವೆ ‖ ೮೭ ‖

ಉಪನಿಷತ್ತುಗಳ ತಲೆದೊಡವಾಗಿ ಹೆಸರಾದ
ನಿನ್ನಡಿಯ ತಾವರೆಯ ಮುಡಿಗೆ ಜೋಡಿಸುತ
ಸೂರಿಗಳು ಸೈಯೆನಲು ನಿನಗೆ ನಾನೆಂದೈಯ
ಪ್ರೀತಿಪಾತ್ರನೆನಿಪ್ಪ ದಾಸನೆನಿಸುವುದು ? ‖ ೮೮ ‖

ಅವತಾರಲೀಲೆಯೊಳಗೊಡನಾಡಿಯಹ ಭಾಗ್ಯ
ವೊದಗಿ ಪುನರಾವೃತ್ತಿರಹಿತನೆಂದೆನಲು
ನಿನ್ನ ಸುಖದಂತೆಯೇ ಎನ್ನ ಸುಖವೂ ಎನಿಸಿ
ಅನುಭವಿಪೆಯೆಂದು ನೀನೆನ್ನ ವಿಭುವೇ ? ‖ ೮೯ ‖

ಇಂತು ಹೊರಹೊಮ್ಮಿರ್ದ್ದ ಬಯಕೆಯಿಂದಂ ಕೂಡಿ
ಈ ಬಗೆಯ ನುಡಿಯಿನಿತೆ ಹುರುಳಾಗಿ ಸಂದ
ಎನ್ನನೆಲೆ ದಾಸಸತ್ಯನೆ ! ಹೆಸರು ಸಾರ್ಥವೆನೆ
ಎಂದುಂ ಅಡಿಯಾಳೆನಿಸು ನೀಂ ಸ್ವತಂತ್ರಂ || ೯೦ ||

ಮಾರುತಿಯ ಜಾತಿ ನಾನೆಂದು ಹುಲುಕಪಿಯೊಂದು
ಕಡಲ ದಾಟಲು ಬಯಸಿ ಮಿಡುಕಿ ತುಡಿವಂತೆ
ಶರಣರೆಲ್ಲಾ ಸೆಪಡುವಡಿದಾವರೆಯು ನಿನ್ನ
ಬೇಡುವೆಂ ! ಕ್ಷಮಿಸೈಯ ಕಾಪೇಯವಿದನು || ೯೧ ||

ಇಂದ್ರಿಯಂಗಳ ಸುಳಿಗೆ ಸಿಲುಕಿ ಭವಸಾಗರದೆ
ಪಾತಳಕೆ ಮುಳುಗುತಿರುವೆನಗೆ ಕೈಗೊಟ್ಟು
ತಾಯಿ ಕೂಸಿಂಗಾಗಿ ಪಥ್ಯವನು ಸೇವಿಸುತ
ನಡೆದು ಕಾಪಿಡುವಂತೆ ರಕ್ಷಿಸಚ್ಯುತನೇ || ೯೨ ||

ಕರ್ಮಗಳ ಬೇಸಗೆಯ ಬೇಗೆಯಿಂ ಬಸವಳಿದ–
ಸುಖದ ಮೃಗತೃಷ್ಣಿಕೆಯಿನಿಂಗದಿಹ ತೃಷೆಯ
ಎನ್ನನಚ್ಯುತ ! ಆಲಿಕಲ್ಲಿನಂತಿರೆ ಕುಳಿರ್ವ
ನೋಟಂಗಳಂ ಕರೆದು ತಣ್ಪಿಸೈಯ || ೯೩ ||

ನಿನ್ನ ಚಿಂತನೆಯುಳಿದು ದೃಷ್ಟಿವಿಷಸರ್ಪಂಗ
ಳಂತೆ ಘೋರರೆನಿಪ್ಪ ಜನರ ನೋಟಕ್ಕೆ
ಸಿಲುಕಿಸದೆ ಅಮೃತಮುಖರಾದ ನಿನ್ನಯ ಭಕ್ತ
ರನಘದೃಷ್ಟಿಗೆ ಗುರಿಯನಾಗಿಸೈಯೆನ್ನ || ೯೪ ||

ತೃಣದಂತೆ ಲಘುವಾಗಿ ವಿಷಮಿಶ್ರ ಮಧುವಂತೆ
ಕೇಡಿಗಾಗರವಾದ ಕೊಳ್ಗೆಯೊಳು ಹೊರಳಿ
ಗಾಸಿವಡುವೀಯೆನ್ನ ಮಾನಗೇಡಿನ ಮನವಂ
ಅಮೃತನಿಧಿಯಾದ ನಿನ್ನಲ್ಲಿ ನೆಲೆಗೊಳಿಸೈ—ಓ ಅಚ್ಯುತನೆ || ೯೫ ||

ಉಗುರ ಹೊಗರಿನ ಹರಿವ ಝರಿಯಿಂದೆ ನಮಿಸಿದರ
ಜ್ವರವ ಶಮಿಸುವ ನಿನ್ನ ಚರಣಯುಗವೆಂಬ
ನಿಧಿಯನೀ ಬರಗೆಟ್ಟ ಕೃಪಣನೆದೆಯಾಳದಲಿ
ಹುದುಗಿಸುತೆ ನಿತ್ಯವೂ ನಲಿಯಿಸೈ ವಿಭುವೈ || ೯೬ ||

ಶರಣಾಗತಂ ನಾನೆನುತ್ತೆ ಜನತತಿ ತಿಳಿದು
ಕೂಗುತಿರೆ—ನೀನೆನ್ನ ಕಾಪಾಡದಿರಲು
ಕಡಲದಂಡೆಯ ಮಳಲಮೇಲೆ ನೀಂ ನುಡಿದ ನುಡಿ
ಕಡಲ ಮೊರೆತದ ವೋಲೆ ವ್ಯರ್ಥವೆಂದೆನರೇ ?—ಪ್ರಭುವೆ || ೯೭ ||

ನಿರ್ಗತಿಕನಾದೆನಗೆ ನೀನೆ ಗತಿ ಸರಿಯೆಂದು
ಕಾರುಣಿಕ ನಿಪುಣರ್ಕಳರ್ಪಿಸಿದರರಿತು
ನಿನಗೆ ಪ್ರಿಯರೆಂದೆನಿಸಿದವರ ನೋಡುತೆ—ಹೊತ್ತ
ಹೊರೆಯುಲ್ಲದನ್ಯವಲ್ಲೆಂದು ಭರಿಸೆನ್ನಂ—ಓ ವಿಭುವೆ ನತಸತ್ಯ ! || ೯೮ ||

ಎಂದೊ ಬೇಡರಪಡೆಗೆ ಸಿಲುಕಿ ಅವರೊಡನಾಡಿ
—ತನ್ನನೇ ಮರೆತಿದ್ದ ರಾಜ ಪುತ್ರನನು
ಮಂತ್ರಿ ತಂದೊಪ್ಪಿಸಲು ಹಿಗ್ಗಿ ನಲಿದಾಡುತ್ತ
—ತಂದೆ ಕೈಕೊಂಡವನ ತನಗೊಪ್ಪುವಂತೆ
ಸರ್ವಸಂಸ್ಕಾರದಿಂ ಹದುಳಗೊಳಿಸುವ ವೋಲು
—ಗುರುಗಳೊಪ್ಪಿಸಿದೆನ್ನ ನೀನು ಕೈಕೊಂಡು
ವಿಷಯವನಗಳ ಬಳಕೆ ಮರೆಯೆ ನಿನ್ನಾಸ್ಥಾನ
—ಸಂಚರಣ ಯೋಗ್ಯತೆಯ ಕಲಿಸಿ ನಲಿಸೈ
ಕಿರಿಯ ಹರೆಯದ ಕನ್ಯೆಗೊದಗಲಿಹ ಜವ್ವನವ
ತಿಳಿದು ವರಿಸುವ ವರನ ತೆರದೆ ನಲಿಸೈ || ೯೯ ||

ಇಂತುಕವಿತಾರ್ಕಿಕರ ನಡುವೆ ಕೇಸರಿಯಾಗಿ
ವೇದಾಂತ ಗುರುವೆನಿಪ ವೆಂಕಟೇಶ್ವರನು
ರಚಿಸಿದಚ್ಯುತಶತಕವಿದು ಸಮಗ್ರಗುಣಂ
ಸಹೃದಯರ ಹೃದಯಕ್ಕೆ ಸೊಗಸುವಾಭರಣಂ || ೧೦೦ ||

ದೇಸಿಗರ ದೇಸಿಗನ ದೇಸಿಯಿೂ ನುಡಿಗಟ್ಟ
ನಾಸರೆಯುಲಚ್ಯುತನ ಚರಣವನು ಮುಟ್ಟ
ನುಡಿಯಲಾಗದ ಹಲವು ಬೇಸರದ ತಲೆಮೆಟ್ಟ
ಹಲರು ಸುಖಿಸಲೆನುತ್ತೆ ಬಯಸುವುದು ದಿಟ್ಟ
**ಸುಖಿಸಲೆಂದಾಶಿಸುವೆನಿಂತು ಕೈಕಟ್ಟ** || ೧೦೧ ||

---

॥ ಶ್ರೀಃ ॥

# ಶ್ರೀ ವೇಂಕಟನಾಥರ ದಶಾವತಾರಸ್ತುತಿ

ದೇವೋ ನಃ ಶುಭಮಾತನೋತು ದಶಧಾ ನಿರ್ವರ್ತಯನ್ ಭೂಮಿಕಾಂ
ರಂಗೇ ಧಾಮನಿ ಲಬ್ಧನಿರ್ಭರ ರಸೈಃ ಅಧ್ಯಕ್ಷಿತೋ ಭಾವುಕೈಃ
ಯದ್ಭಾವೇಷು ಪೃಥಗ್ವಿಧೇಷ್ವನುಗುಣಾನ್ ಭಾವಾನ್ ಸ್ವಯಂ ಬಿಭ್ರತೀ
ಯುದ್ಧರ್ಮೈರಿಹ ಧರ್ಮಿಣೀ ವಿಜಯತೇ ನಾನಾಕೃತಿರ್ನಾಯಿಕಾ ॥ ೧ ॥

ನಿರ್ಮಗ್ನ ಶ್ರುತಿಜಾಲಮಾರ್ಗಣದಶಾದತ್ತಕ್ಷಣೈರೀಕ್ಷಣೈಃ
ಅಂತಸ್ತನ್ವದಿವಾರವಿಂದಗಹನಾನ್ಯಾದನ್ವತೀನಾಮಪಾಂ
ನಿಷ್ಪ್ರತ್ಯೂಹತರಂಗರಿಙ್ಗಣಮಿಥಃಪ್ರತ್ಯೂಢಪಾಥಶ್ಛಟಾ
ದೋಳಾರೋಹಣದೋಹಳಂ ಭಗವತೋ ಮಾತ್ಸ್ಯಂ ವಪುಃ ಪಾತು ನಃ ॥ ೨ ॥

ಅವ್ಯಾಸುರ್ಭುವನತ್ರಯೀಮನಿಭೃತಾಂ ಕಂಡೂಯನೈರದ್ರಿಣಾ
ನಿದ್ರಾಣಸ್ಯ ಪರಸ್ಯ ಕೂರ್ಮವಪುಷೋ ನಿಶ್ವಾಸವಾತೋರ್ಮಯಃ
ಯದ್ವಿಕ್ಷೇಪಣ ಸಂಸ್ಕೃತೋದಧಿಪಯಃಪ್ರೇಂಖೋಳ ಪರ್ಯಂಕಿಕಾ
ನಿತ್ಯಾರೋಹಣನಿರ್ವೃತೋ ವಿಹರತೇ ದೇವಃ ಸಹೈವ ಶ್ರಿಯಾ ॥ ೩ ॥

॥ ಶ್ರೀ ॥

# ಶ್ರೀ ವೇಂಕಟನಾಥರ ದಶಾವತಾರ ಸ್ತೋತ್ರ

(ಅನುವಾದ)

—•—

ಸಹಜವಿದು ಸಹಧರ್ಮಿಣೀತ್ವಕೆನೆ ಬಲ್ಲವರು
ಬೇರೆಬೇರೆಯ ತನ್ನ ವಿವಿಧ ವೇಷದಲಿ
ಅನುರೂಪರೂಪಗಳ ಧರಿಸುತ್ತೆ ಸಿರಿದೇವಿ
ನಾಯಿಕಾಭಾವದಿಂ ವಿಹರಿಸುತಿರೆ
ಹತ್ತುಬಗೆ ವೇಷಗಳ ಕೈಕೊಂಡು ರಂಗದಲಿ
ಮೈದೋರಿ ಭಾವುಕರ ಕಣ್ಮನವ ನಲಿಸಿ
ಪರರಸದೆ ಮುಳುಗಿಸುವ ಲೀಲಾವಿಹಾರಿ ಹರಿ
ಕೊಡಲೆಮಗೆ ಮಂಗಳವನು ॥ ೧ ॥

ಮುಳುಗಿ ಮರೆಯಾಗಿದ್ದ ಶ್ರುತಿತತಿಯನರಸುತ್ತ
ಹುಡುಕುನೋಟವ ಚೆಲ್ಲಿ ಸುತ್ತಮುತ್ತ
ಕಡಲ ನೀರೊಳಗುಂಟು ತಾವರೆಯ ವನವೆಂಬ
ಭಾವವೊಂದನು ಮನಕೆ ಮೂಡಿಸುತ್ತ
ತಡೆಯಿಲ್ಲದಿದಿರೆದ್ದು ಮೊರೆಮೊರೆದು ರಿಂಗಣಂ
ಗುಣಿವ ತೆರೆಯೋಳಿಗಳ ಜಲರಾಶಿಯಾ
ಸೊಗಸುದೊಟ್ಟಿಲನೇರಿ ವಿಹರಿಸಲು ಬಯಸಿದಾ
ಪ್ರಭುವ ಮತ್ಸ್ಯಾಕೃತಿಯು ಪೊರೆಯಲೆಮ್ಮಂ ॥ ೨ ॥

ಕಡಲ ನಡುವಣ ತೆರೆಯ ತೂಗುಮಂಚವನೇರಿ
ಸಿರಿಯೊಡನೆ ನಿತ್ಯವೂ ಸುಖಿಸೆ ಬಯಸಿ
ವಿವಿಧ ವಸ್ತುವ ಸುರಿದು ಜಲನಿಧಿಯ ಸಂಸ್ಕರಿಸಿ
ಕಡೆಯೆ ದೇವಾಸುರರ ಮಿಗೆ ಪ್ರೇರಿಸಿ
ಮಂದರದ ಕಡೆಗೋಲು ಬೆನ್ನ ತುರಿಸುತ್ತಿರಲು
ನವೆ ನೀಗಿ ಸೊಗವಾಗಿ ತೂಂಕಡಿಸಿದಾ
ಪರಮನಾ ಕೂರ್ಮರೂಪದ ತನುವಿನುಸಿರಿಂದಲ್—ಎದ್ದತೆರೆ
ಕಾಪಿಡಲಿ ಮೂಜಗವನು ॥ ೩ ॥

ಗೋಪಾಯೇದನಿಶಂ ಜಗಂತಿ ಕುಹನಾಪೋತ್ರೀ ಪವಿತ್ರೀಕೃತ
ಬ್ರಹ್ಮಾಂಡಪ್ರಳಯೋರ್ಮಿಘೋಷ ಗುರುಭಿಃ ಘೋಣಾರವೈಃ ಘುರ್ಘುರೈಃ
ಯದ್ದಂಷ್ಟ್ರಾಂಕುರಕೋಟಿಗಾಢಘಟನಾ ನಿಷ್ಕಂಪನಿತ್ಯಸ್ಥಿತಿಃ
ಬ್ರಹ್ಮಸ್ತಂಬಮಸೌದಸೌ ಭಗವತೀ ಮುಸ್ತೇವ ವಿಶ್ವಂಭರಾ || ೪ ||

ಪ್ರತ್ಯಾದಿಷ್ಟಪುರಾತನಪ್ರಹರಣಗ್ರಾಮಃ ಕ್ಷಣಂ ಪಾಣಿಜೈಃ
ಅವ್ಯಾತ್ರೀಣಿ ಜಗಂತ್ಯಕುಂಠಮಹಿಮಾ ವೈಕುಂಠ ಕಂಠೀರವಃ
ಯತ್ಪ್ರಾದುರ್ಭವನಾದವಂಧ್ಯಜಠರಾ ಯಾದೃಚ್ಛಿಕಾದ್ವೇಧಸಾಂ
ಯಾ ಕಾಚಿತ್ಸಹಸಾ ಮಹಾಸುರಗೃಹಸ್ಥೂಣಾ ಪಿತಾಮಹ್ಯಭೂತ್ || ೫ ||

ವ್ರೀಡಾವಿದ್ಧವದಾನ್ಯದಾನವಯಶೋ ನಾಸೀರಧಾಟೀಭಟಃ
ತ್ರಯ್ಯಕ್ಷಂ ಮಕುಟಂ ಪುನ್ನನವತು ನಃ ತ್ರೈವಿಕ್ರಮೋ ವಿಕ್ರಮಃ
ಯತ್ಪ್ರಸ್ತಾವಸಮುಚ್ಛ್ರಿತ ಧ್ವಜಪಟೀ ವೃತ್ತಾಂತ ಸಿದ್ಧಾಂತಿಭಿಃ
ಸ್ರೋತೋಭಿಃ ಸುರಸಿಂಧುರಷ್ಟಸು ದಿಶಾಸೌಧೇಷು ದೋಧೂಯತೇ || ೬ ||

ಕ್ರೋಧಾಗ್ನಿಂ ಜಮದಗ್ನಿ ಪೀಡನಭವಂ ಸಂತರ್ಪಯಿಷ್ಯನ್ ಕ್ರಮಾತ್
ಅಕ್ಷತ್ರಾಮಿಹ ಸಂತತಕ್ಷಯ ಇಮಾಂ ತ್ರಿಸ್ಸಪ್ತಕೃತ್ವಃ ಕ್ಷಿತಿಂ
ದತ್ವಾ ಕರ್ಮಣಿ ದಕ್ಷಿಣಾಂ ಕ್ವಚನ ತಾಮುಸ್ಕಂಧ್ಯ ಸಿಂಧುಂ ವಸನ್
ಅಬ್ರಹ್ಮಣ್ಯಮಪಾಕರೋತು ಭಗವಾನಾಬ್ರಹ್ಮಕೀಟಂ ಮುನಿಃ || ೭ ||

ಕೋರೆದಾಡೆಯ ಮೊಳೆಯ ತುದಿಯಿಂದ ಸಂಘಟಿಸಿ
ದೃಢವಾಗಿ ನೆಲೆಗೊಳಿಸಿ ವಿಶ್ವಧರೆಯ
ಮುಸ್ತೆಯಂ ಹಡೆವಂತೆ ಬ್ರಹ್ಮಮಂ ಸ್ತಂಬಮಂ
ಪಡೆಯಿಸಿದ ಸೋಜಿಗದ ಪರಮನಾಗಿ
ಪ್ರಳಯ ಜಲಧಿಯ ತೆರೆಯ ಮೊರೆತವನೆ ಮೀರಿದಾ
ಘುರುಘುರುಧ್ವನಿಯಿಂದೆ ಜಗವನೆಲ್ಲಾ
ಪಾವನಂಗೊಳಿಸಿರ್ದ ಮಾಯಾವರಾಹತನು
ಜಗವನೆಂದುಂ ಪೊರೆಯಲಿ ॥ ೪ ॥

ಬಳಬಳಸಿ ಬೇಸರಂಗೊಂಡಂತೆ ತೊರೆದೆಲ್ಲ
ಬಲ್ಲ ದಿವ್ಯಾಯುಧಂಗಳ ತತಿಯನು
ಕೈಯುಗುರೆ ಸಾಕಾವ ಕೃತಿಗವಿಘಾತಂಗೊಂದು
ಕೊರೆಯಿಲ್ಲವೆಂಬುದಂ ಲೋಕವರಿಯೆ
ಅಸುರನರಮನೆಯೊಂದು ಕಂಬಮುಂ ಬಂಜೆ ನಾ
ನಲ್ಲ ಬ್ರಹ್ಮಂಗಜ್ಜಿಯೆಂದು ನಲಿಯೆ
ಅವತರಿಸಿ ಗರ್ಭದಲಿ ತೋರಿದಾ ವೈಕುಂಠ
ಸಿಂಹನೋವಲಿ ತ್ರಿಜಗವಂ ॥ ೫ ॥

ಮುಕ್ಕಣ್ಣನುರುಮುಡಿಯ ತೊಳೆದು ಪಾವನಗೊಳಿಸೆ
ಸಂಕಲ್ಪಗೊಂಡಂತೆ ವಿಕ್ರಮಿಸುತ
ಕೊಡುಗೈಯ ಕಲಿ ಬಲಿಯ ಕೀರ್ತಿಯಂ ಜಗಕೆಲ್ಲ
ಸಾರುವೂಳಿಗದಣಿಯ ಪ್ರಥಮ ಭಟನಾಗಿ
ಎತ್ತಿದಾ ಬಾವುಟದ ಪಟದ ಹರಿವಿನವೋಲು
ಚರಣದುಂಗುಟದಲ್ಲಿ ಬಳೆದ ಗಂಗೆ
ದಿಗ್ದಿಗಂತದ ಸೌಧಮಂಡಲದ ಬಳಿ ಮಿಳಿರೆ
ಹರಿಯಿಸಿದ ತ್ರಿಕ್ರಮಂ ಪೊರೆಯಲೆಮ್ಮಂ ॥ ೬ ॥

ಜಮದಗ್ನಿ ಹಿಂಸೆಯಿಂದೊಗೆದ ರೋಷಾಗ್ನಿಯಂ
ತರ್ಪಿಸಲು ಮೂರೇಳುಬಾರಿ ಧರೆಯಂ
ಬಳಸಿ ದುಷ್ಟಕ್ಷತ್ರಕುಲವನಿಲ್ಲೆಂದೆನಿಸಿ
ಯಜ್ಞ ದಕ್ಷಿಣೆಯಾಗಿ ನೆಲವನಿತ್ತು
ಕಡಲನೊಕ್ಕಡೆ ದೂಡಿ ಕಡೆಗೊಂದುಕಡೆ ನೆಲಸಿ
ಹಿರಿಯನೆನಿಸಿದ ಭುವನಭರಣನಿಪುಣಂ
ಬ್ರಹ್ಮಕುಲ ಪೀಡೆಯಂ ಪರಿಹರಿಸಿ ಪಾಲಿಸಲಿ
ಬ್ರಹ್ಮಕೀಟಂಬರೆಗೆಮೊಲ್ದ ಮುನಿಪಂ ॥ ೭ ॥

ಪಾರಾವಾರಪಯೋ ವಿಶೋಷಣಕಲಾಪಾರೀಣ ಕಾಲಾನಲ
ಜ್ವಾಲಾಜಾಲ ವಿಹಾರಹಾರಿ ವಿಶಿಖವ್ಯಾಪಾರ ಘೋರಕ್ರಮಃ
ಸರ್ವಾವಸ್ಥ ಸಕೃತ್ಪ್ರಪನ್ನ ಜನತಾ ಸಂರಕ್ಷಣೈಕವ್ರತೀ
ಧರ್ಮೋ ವಿಗ್ರಹವಾನ್ ಅಧರ್ಮವಿರತಿಂ ಧನ್ವೀ ಸ ತನ್ವೀತು ನಃ ॥ ೮ ॥

ಫಕ್ಕತ್ಕೌರವಪತ್ತನ ಪ್ರಭತಯಃ ಪ್ರಾಸ್ತಪ್ರಲಂಬಾದಯಃ
ತಾಲಾಂಕಸ್ಯ ತಥಾವಿಧಾ ವಿಹೃತಯಃ ತನ್ವಂತು ಭದ್ರಾಣಿ ನಃ
ಕ್ಷೀರಂ ಶರ್ಕರಯೇವ ಯಾಭಿರಪೃಥಗ್ಭೂತಾಃಪ್ರಭೂತೈರ್ಗುಣೈಃ
ಆಕೌಮಾರಕಮಸ್ವದಂತ ಜಗತೇ ಕೃಷ್ಣಸ್ಯ ತಾಃ ಕೇಳಯಃ ॥ ೯ ॥

ನಾಥಾಯೈವ ನಮಃಪದಂ ಭವತು ನಃ ಚಿತ್ರೈಶ್ಚರಿತ್ರಕ್ರಮೈಃ
ಭೂಯೋಭಿಃ ಭುವನಾನ್ಯಮೂನಿ ಕುಹನಾಗೋಪಾಯ ಗೋಪಾಯತೇ
ಕಾಳಿಂದೀರಸಿಕಾಯ ಕಾಳಿಯಫಣಿಸ್ಫಾರಸ್ಫಟಾ ವಾಟಿಕಾ
ರಂಗೋತ್ಸಂಗತರಂಗ ಚಂಕ್ರಮಧುರಾ ಪರ್ಯಾಯ ಚರ್ಯಾಯತೇ ॥ ೧೦ ॥

ಭಾವಿನ್ಯಾ ದಶಯಾ ಭವನ್ನಿಹ ಭವಧ್ವಂಸಾಯ ನಃ ಕಲ್ಪತಾಂ
ಕಲ್ಕೀ ವಿಷ್ಣುಯಶಃಸುತಃ ಕಲಿಕಥಾಕಾಲುಷ್ಯಕೂಲಂಕಷಃ
ನಿಶ್ಶೇಷ ಕ್ಷತಕಂಟಕೇ ಕ್ಷಿತಿತಲೇ ಧಾರಾಜಲೌಘೈಃ ಧ್ರುವಂ
ಧರ್ಮಂ ಕಾರ್ತಯುಗಂ ಪ್ರರೋಹಯತಿ ಯನ್ನಿಸ್ತ್ರಿಂಶ ಧಾರಾಧರಃ ॥ ೧೧ ॥

ಪ್ರಳಯದಗ್ನಿಯ ಹೊಮ್ಮಿದುರಿಯ ರಾಶಿಯ ರಭಸ
ವಿನಿತಿಲ್ಲವೆಂದೆನಲು ಕಡುಹ ಕೈಕೊಂಡು
ಕಡಲ ನೀರೆಲ್ಲವಂ ಬತ್ತಿಸುವ ಕಲೆಯಲ್ಲಿ
ಪರಿಣತಿಯ ತೋರಿಸಿದ ಘನಬಾಣಮುಹಿಮಂ
ಒಮ್ಮೆ ಶರಣೆಂದವರದಾರಿರಲಿ ಯೆಂತಿರಲಿ
ರಕ್ಷಿಸುವ ವ್ರತವೊಂದೆ ದೀಕ್ಷೆ ತನಗಾದ
ಧರ್ಮವೇ ಮೈವೆತ್ತ ಬಿಲ್ಗಾರನೆಮಗೆ
ಅಧರ್ಮದ ಗಸಣಿಯಿಲ್ಲೆನಿಸಲಿ ॥ ೮ ॥

ಹಾಲೊಡನೆ ಸಕ್ಕರೆಯು ಬೆರೆತಂತೆ ಶ್ರೀಕೃಷ್ಣ
ಲೀಲೆಯೊಡನಿರೆ ತನ್ನ ಕೌಮಾರಕೇಳಿ
ಬೇರೆನಿಸಿ ತೋರದೆಯೆ ಸೊಗಸು ಹೆಚ್ಚಿರೆ ಜಗಕೆ
ಸಹಜವೆನಿಸಿಂಪು ತೋರಿ
ಕೌರವನ ನಗರಿಯನು ನದಿಗೆ ದೂಡುವ ಯತ್ನ
ವಾ ಪ್ರಲಂಬಾದ್ಯಸುರ ವಧವೆಂಬ ತೆರದಾ
ಸೋಜಿಗದ ಹಲಬಗೆಯ ಹಲಧರನ ಲೀಲೆಗಳು
ಕೊಡಲೆಮಗೆ ಮಂಗಳವನು ॥ ೯ ॥

ಕಾಳಿಯನ ಹೆಡೆಯೆಡೆಯ ರತ್ನಪ್ರಕಾಶಮಯ
ನೂತನದ ಚಿತ್ರಮಯ ರಂಗಗಳಲಿ
ನೂರುಬಗೆ ನೃತ್ಯವನು ತೋರಿ ರಸವಂ ಬೀರಿ
ಕಂಡವರ ಕಣ್ಮನವ ತಣಿಸಿ ನಲಿಸಿ
ಅದ್ಭುತದ ಚರಿತಕ್ರಮಂಗಳಿಂ ಮರಮುರಳಿ
ಜಗದೆಡರನೊಡನೊಡನೆ ತೂರಿ ಪೊರೆದಾ
ಕಪಟಗೋಪಾಲಂಗೆ ಯಮುನಾವಿಹಾರ
ರಸಿಕಂಗೆಮ್ಮ ನತಿ ಮೀಸಲು ॥ ೧೦ ॥

ಬರಲಿರುವ ಕಾಲದಲಿ ವಿಷ್ಣುಯಶಸುತನಾಗಿ
ಕಲಿಕಥೆಯ ಕಲ್ಮಷದ ರಾಶಿಗಳನು
ಬುಡಮುಟ್ಟ ಕೊಚ್ಚಿಟ್ಟು ಮುಳ್ಳುಕಳೆಯಿಲ್ಲದೊಲು
ಭೂಮಿಯನು ಹದವರಿತು ಹಸನುಗೊಳಿಸಿ
ಕೃತಯುಗದ ಧರ್ಮವನು ಕ್ಷಿತಿಯಲ್ಲಿ ನಾಟುತ್ತ
ಜಡ ಧಾರಾಜಲದೆ ಪೋಷಿಪಾತಂ
ಹುಟ್ಟು ಸಾವಿನ ನಮ್ಮ ವಿಲಗವನು ಹೋಗಾಡಿ
ಕಾಪಿಡಲಿ ಕೃಪೆಯಿಟ್ಟು ಕಲ್ಕಿರೂಪಂ ॥ ೧೧ ॥

ಇಚ್ಛಾಮೀನ, ವಿಹಾರಕಚ್ಛಪ, ಮಹಾಪೋತ್ರಿನ್, ಯದೃಚ್ಛಾಹರೇ
ರಕ್ಷಾವಾಮನ ರೋಷರಾಮ ಕರುಣಾ ಕಾಕುತ್ಸ್ಥ ಹೇಲಾಹಲಿನ್
ಕ್ರೀಡಾವಲ್ಲವ ಕಲ್ಕಿವಾಹನದಶಾಕಲ್ಕಿನ್ ಇತಿ ಪ್ರತ್ಯಹಂ
ಜಲ್ಪಂತಃ ಪುರುಷಾಃ ಪುನಂತಿ ಭುವನಂ ಪುಣ್ಯೌಘಪಣ್ಯಾಪಣಾಃ ॥ ೧೨ ॥

ವಿದ್ಯೋದನ್ವತಿ ವೆಂಕಟೇಶ್ವರ ಕವೌ ಜಾತಂ ಜಗನ್ಮಂಗಳಂ
ದೇವೇಶಸ್ಯ ದಶಾವತಾರ ವಿಷಯಂ ಸ್ತೋತ್ರಂ ವಿವಕ್ಷೇತ ಯಃ
ವಕ್ತ್ರೇ ತಸ್ಯ ಸರಸ್ವತೀ ಬಹುಮುಖೀ ಭಕ್ತಿಃ ಪರಾ ಮಾನಸೇ
ಸಿದ್ಧಿಃ ಕಾಪಿ ತನೌ ದಿಶಾಸು ದಶಸು ಖ್ಯಾತಿಃ ಶುಭಾ ಜೃಂಭತೇ ॥ ೧೩ ॥

---

ಇಚ್ಛೆಯಿಂ ಮೀನ ವಿಹರಣಶೀಲಕೂರ್ಮ
ಘನವಾರಾಹ ಹೇಗೊ ಸಿಂಹ
ರಕ್ಷಾ ವಿನೋದವಾಮನ ರೋಷರಾಮ
ಕರುಣಾಸೀನು ಕಾಕುತ್ಸ್ಥನೇ
ಲೀಲಾವಿಹಾರಿ ಹಲಧಾರಿ ಕೇಳೀಶೀಲ
ಗೋಪಾಲ ಕಲ್ಕಿವಾಹಾ
ಎನುತೆ ದಿನ ನುಡಿವವರು ಜಗವ ಪಾವನಗೊಳಿಸಿ
ಪುಣ್ಯವಂ ಮಾರುತಿಹರು ॥ ೧೨ ॥

ವಿದ್ಯಾಸಮುದ್ರ ಕವಿ ವೆಂಕಟೇಶ್ವರನಿಂದೆ
ಲೋಕಮಂಗಳಕಾಗಿ ಮೂಡಿಬಂದ
ದೇವದೇವನ ಹತ್ತುಮವತಾರ ವಿಷಯದೀ
ಸ್ತೋತ್ರಮಂ ಹಾಡುವವರಾ
ಮುಖದಲ್ಲಿ ಬಹುಮುಖಿ ಸರಸ್ವತಿಯು ಮನದಲ್ಲಿ
ಪರಭಕ್ತಿ ತನುವಿನಲ್ಲಿ
ಪರಮಸಿದ್ಧಿಯು ಹತ್ತು ದೆಸೆಯಲ್ಲಿ ಶುಭಕೀರ್ತಿ
ಯುಜ್ಜ್ವಲಿಸಿ ರಾಜಿಸುವುವು ॥ ೧೩ ॥

---

